ಕರ್ಣಾಟಕಸುವರ್ಣೇತಿಹಾಸದಲ್ಲಿ ವಜ್ರವೈಢೂರ್ಯಖಚಿತ ಜಾಜ್ವಲ್ಯಮಾನ ಪರ್ವ. ಭವ್ಯ ವಿಜಯ ನಗರದ ಭವ್ಯತಮ ಸಾರ್ವಭೌಮ ಕೃಷ್ಣದೇವರಾಯನ ರೋಮಾಂಚಕ ಕಥಾನಕ.

ಕರ್ಣಾಟಕವನ್ನು ಕಬಳಿಸಲು ಶತ್ರುಸುಲ್ತಾನರ ಕುಟಿಲ ಕಾರಸ್ಥಾನಗಳ ಕೋಲಾಹಲ! ಜಗನ್ಮೋಹಿನಿ ಭರ್ತ ಕೃಷ್ಣದೇವರಾಯನನ್ನು ಕಠಾರಿಯ ಕೂರಲಗಿನಿಂದ ತಿವಿಯಲು, ಪುನರ್ಜನ್ಮವುಂಟಾಗಿಸಿದ ಸಚಿವೋತ್ತಮನ ಚತುರ ಚಾಣಕ್ಯತೆ! ನೆತ್ತರು ಹೆಪ್ಪಿಕ್ಕುವ ಭೀಷಣ ಸಮರಾಂಗಣಗಳ ಪರಂಪರೆ! ಜಗದೇಕಮಲ್ಲ ಕೃಷ್ಣದೇವರಾಯ ಆಂಧ್ರ ಉತ್ಕಲ ಬಹಮನಿಗಳನ್ನು ಸದೆಬಡಿದು ವಿಜಗೀಷುವಾದ ವೈಭವ! ಓದುಗ ಸತ್ವಹೀನ ಅರ್ವಾಚೀನವನ್ನು ಮರೆತು, ಮನೋಪಟಲದಲ್ಲಿ ತಲ್ಲಣ, ಆನಂದ, ಅನುಕಂಪ, ಭೀತಿ, ಉತ್ಕರ್ಷಗಳ ಚಿತ್ರಗಳನ್ನು ಕ್ಷಣಕ್ಕೊಮ್ಮೆ ಪರಿವರ್ತಿಸಿ ಬಿತ್ತರಿಸುವ ರೋಮಾಂಚಕ ಗತಶತಮಾನದಲ್ಲಿ ಬಾಳುವನು. ಕರ್ಣಾಟಕದೇವಿಯ ಯಶೋದುಂದುಭಿ ದಿಗಂತವ್ಯಾಪ್ತವಾದ ಮಹದುತ್ಕರ್ಷದಲ್ಲಿ ಕನ್ನಡಿಗ ಹುರಿದುಂಬುವನು.

ವಸುದೇವ್ ಭೂಪಾಲಂರ ಸಿದ್ಧಹಸ್ತ ಇತಿಹಾಸದ ಕಗ್ಗಲ್ಲನ್ನು ಕಡೆದು, ಸುಭಗ ಶಿಲ್ಪಾಕೃತಿಗಳನ್ನು ರೂಪಿಸಿದೆ; ಭವ್ಯ ಕಥಾದೇಗುಲವನ್ನು ವಿನಿರ್ಮಿಸಿದ ಕಲಾಕುಶಲಿಯಾಗಿದೆ.

— **ಪ್ರಕಾಶಕರು**



# ಆಹಾ ಕರ್ನಾಟಕದೇವಿ

ವಸುದೇವ್ ಭೂಪಾಲಂ, ಎಂ.ಎ.



# ಘಟನಾವಳಿ

ರಾಜ್ಯಾರೋಹಣ

ಆಳೌ ಕರ್ಣಾಟಕದೇವಿ

ಗಜಪತಿಯ ಕುಂಭದಲ್ಲಿ ಕರ್ಣಾಟಕಸಿಂಹನ ನಖ

ಸಾಳುವ ತಿಮ್ಮನ ಚಾಣಾಕ್ಷತನ

ಬೆಂಕಿಗೆ ತುಪ್ಪ

ರಾಯ್ಚೂರ ರಣಭೂಮಿ

ಅಸದಖಾನನ ಕಾರಸ್ಥಾನ

ಮಹಾನವಮಿ

‘ ಅರಿಯಬಲ್ಲವರಾರು ಆಗುಹೋಗುಗಳನ್ನು ’

ಸೂರ್ಯಾಸ್ತ





## ರಾಜ್ಯಾರೋಹಣ

ಮಹಾರಾಜಾಧಿರಾಜ ರಾಜಪರಮೇಶ್ವರ ವೀರನರಸಿಂಹ ಮರಣಾಸನ್ನನಾಗಿ ಸುವರ್ಣಮಂಚದಲ್ಲಿ ಪವಡಿಸಿದ್ದನು ; ವಿಲಾಸಿ ವಿನೋದಪ್ರಿಯ ವೀರನರಸಿಂಹನಿಗೆ ಮೋದಪೂರಿತ ಜಗತ್ತಿನಿಂದ ನಿರ್ಗಮಿಸುವುದು ವಿಶೇಷ ಕ್ಲೇಶಕಾರಿ. ಬದುಕು ಸಾವು ಮಾನವಾತೀತವೆಂಬ ತಿಳಿವು ಅವನ ಕ್ಲೇಶಕ್ಕೆ ಮಿತಿ ತಂದಿತ್ತು ; ಆದರೆ ತನ್ನ ಅನಂತರ ತನ್ನ ಕುಮಾರ ವಿರೂಪಾಕ್ಷನಿಗೆ ಕರ್ಣಾಟಕದ ಅರಸುತನ ತಪ್ಪಿಹೋದೀತೋ, ಎಂಬ ಸಂದೇಹ ಅವನ ಹೃದಯಮಂಥನಮಾಡಿ, ವಿಕ್ಷೋಭೆ ಎಬ್ಬಿಸಿತ್ತು. ವಿರೂಪಾಕ್ಷ ಇನ್ನೂ ಎಂಟು ವರ್ಷದ ಹಸುಳೆ; ಸೋದರ ಕೃಷ್ಣದೇವನಾದರೋ ಇಪ್ಪತ್ತು ವರ್ಷದ ಯೌವನಸ್ಥ ; ಮಂಡಲೇಶ್ವರರೂ, ಅರಮನೆಯ ಕಾರಸ್ಥಾನಿಗಳೂ ಒಂದುಗೂಡಿ ವಯಸ್ಕ

ಕೃಷ್ಣದೇವನೇ ಅರಸುಪಟ್ಟಕ್ಕೆ ಅರ್ಹನೆಂದು ತೀರ್ಮಾನಿಸಿದರೆ! ವೀರನರಸಿಂಹನ ಸುಂದರ ಮುಖಮಂಡಲ ಈರ್ಷೆಯಿಂದ ಕರಾಳವಾಯಿತು.

ಕೃಷ್ಣದೇವ ವಯಸ್ಕ ಮಾತ್ರವಲ್ಲ; ಸಮರ್ಥ, ಸಮರಧುರಂಧರ, ಜನಾನುರಾಗಿ. ಸಾಮ್ರಾಜ್ಯದ ಸರ್ವಾಧಿಕಾರ ಹಿರಿಯಣ್ಣನಾದ ನನಗೇ ತಪ್ಪಿಹೋಗಿ ಕೃಷ್ಣದೇವನಿಗೆ ಸಲ್ಲಬೇಕಿತ್ತು, ತಂದೆಯ ಅಪೇಕ್ಷೆಯಂತೆ. ಪ್ರಥಮ ಪತ್ನಿಯ ಪುತ್ರ ನಾನಾದರೂ, ತಂದೆ ನರಸನಾಯಕನಿಗೆ ನಾಗಲಾದೇವಿಯಲ್ಲಿ ಜನಿಸಿದ ಪುತ್ರ ಕೃಷ್ಣದೇವನಲ್ಲೇ ಪ್ರೀತಿ, ಆದರ ಹೆಚ್ಚು. ತಂದೆಗೆ ನನ್ನ ವಿಲಾಸಪ್ರಿಯತೆ ಒಲ್ಲದಾದರೆ, ಕೃಷ್ಣದೇವನ ಪರಾಕ್ರಮ ಚಾತುರ್ಯ ಬಹು ಅಚ್ಚುಮೆಚ್ಚು. ತಂದೆಯ ಮರಣ ಕಾಲದ ಪರೀಕ್ಷೆಯಲ್ಲೂ ನಾನೇ ಸೋತೆ. ತಾ ಅವಸಾನಗೊಂಡಮೇಲೆ ತನ್ನ ಬೆರಳುಂಗುರವನ್ನು ತೆಗೆಯುವ ಮಗನೇ ತನಗೆ ಉತ್ತರಾಧಿಕಾರಿ, ಎಂದವನೆ ತಂದೆ ಕೊನೆಯುಸಿರು ಬಿಟ್ಟ. ಹಿರಿಯ ಮಗನೆಂಬ ಉಬ್ಬಿನಿಂದ ಉಂಗುರ ತೆಗೆದು ಉತ್ತರಾಧಿಕಾರಿಯಾಗಲು ನಾನೇ ಮುಂದಾದೆ. ವ್ಯಾಧಿಯಿಂದ ತಂದೆಯ ಕೈಬೆರಳು ಊದಿದ್ದವು; ನನ್ನ ಸರ್ವ ಶಕ್ತಿಯನ್ನೂ ಬಳಸಿ ಎಳೆದರೂ ಉಂಗುರ ಬೆರಳಿನಿಂದ ಜಾರದಾಯಿತು; ಬೆವರಿ, ಸೋತು ಹಿಂದಾದೆ. ಎರಡನೆ ಮಗ ಕೃಷ್ಣದೇವ ತನಗೆ ಅಧಿಕಾರ ಬೇಡವೆಂಬ ಕಪಟ ನಟನೆಯಿಂದ ದೂರವೇ ನಿಂತಿದ್ದ. ಅಚ್ಯುತ, ರಂಗರೂ ಉಂಗುರವೆಳೆದೆಳೆದು ಸೋತರು. ಕೃಷ್ಣದೇವ ಮೆಲ್ಲನೆ ಮುಂದಾಗಿ ಚೂರಿಯಿಂದ ತಂದೆಯ ಬೆರಳು ಕತ್ತರಿಸಿ, ಉಂಗುರ ತೆಗೆದ. ತಂದೆಯ ಆದೇಶದಂತೆ ಅವನೇ ಉತ್ತರಾಧಿಕಾರಿಯಾಗಬೇಕಿತ್ತು. ನೈಜ ಉತ್ತರಾಧಿಕಾರಿಯಾದ ನನ್ನೊಂದಿಗೆ ಸೆಣೆಸಲಾರದೆಯೋ ಏನೋ ಕೃಷ್ಣ ಕಲಹಕ್ಕೆಳೆಸದೆ ಸುಮ್ಮನಾದ. ಹದ್ದಿನಂತೆ ಹೊಂಚು ಹಾಕುತ್ತಿರುವ ಕೃಷ್ಣದೇವ ನನ್ನ ಮುಗಿವಿನ ನಂತರ ರಾಜ್ಯಾಧಿಕಾರವನ್ನು ಕಸಿದುಕೊಳ್ಳದೆ ಸುಮ್ಮನಿದ್ದಾನೆಯೆ! ನನ್ನ ನಚ್ಚಿನ ಕುವರ ವಿರೂಪಾಕ್ಷ ಕರ್ಣಾಟಕ ಸಿಂಹಾಸನಾಧೀಶ್ವರನಾಗಿ, ನನ್ನ ವಂಶಲತೆಯನ್ನು ಬಳೆಸಿ, ತುಳುವಂಶಜ ರಾಜ್ಯಸ್ಥಾಪಕ ವೀರನರಸಿಂಹನ

ಕೀರ್ತಿಯನ್ನು ಅಜರಾಮರವಾಗಿಸುವುದರ ಬದಲು, ಕೃಷ್ಣದೇವ ಅರಸನಾಗುವುದಾದರೆ ಸಾಳುವ ನರಸಿಂಹರಾಜನನ್ನು ಮೂಲೆಗೊತ್ತಿ ನಾನು ಅನ್ಯಥಾ ಅಪಕೀರ್ತಿಗೆ ಪಾತ್ರನಾದಂತಾಯಿತಲ್ಲ! ಇಲ್ಲಿಲ್ಲ; ಕೃಷ್ಣದೇವ ಕರ್ಣಾಟಕದ ಅಧಿಪತಿಯಾಗದಂತೆ ವಿಘ್ನ ತಾರದಿದ್ದಲ್ಲಿ ನಾ ಅರಸಾದುದೇ ವ್ಯರ್ಥ.

ಕರಾಳ ಆಲೋಚನಾತರಂಗದಲ್ಲಿ ಹೊಯ್ದಾಡುತ್ತಿದ್ದ ಅರಸನಿಗೆ ಮಂತ್ರಿ ಸಾಳುವ ತಿಮ್ಮನ ಆಗಮನ ಅಗೋಚರ.

'ಮಹಾಪ್ರಭೂ ! ಈಗ ಉತ್ತಮವೆ ?'

ದನಿ ಕೇಳಿ ದೊರೆ ಕಣ್ಣು ತೊರಳಿಸಿದ. 'ದೈಹಿಕ ವ್ಯಾಧಿಯೊಂದಿಗೆ ಮನೋವ್ಯಾಧಿಯಿಂದಲೂ ನರಳುತ್ತಿದೇನೆ. ದೈಹಿಕವ್ಯಾಧಿ ಉತ್ತಮಗೊಳ್ಳುವ ಲಕ್ಷಣವೂ ಇಲ್ಲ. ನೀನು ರಾಜನಿಷ್ಠನಾಗಿರುವುದು ನಿಜವಾದರೆ ನನ್ನ ಮನೋವ್ಯಾಧಿ ಗುಣವೊಂದಿ, ನಾ ಶಾಂತಿಯ ಉಸಿರ್ಗರೆದು ಅಸುನೀಗಬಲ್ಲೆ.'

'ಅಪ್ಪಣೆಯಾಗಲಿ. ಸಾಮ್ರಾಜ್ಯದ ಸೌಖ್ಯಕ್ಕಾಗಿ ನನ್ನಸು ಮುಡಿಪು '

'ಅರಸನ ನಂತರ ಅವನ ಮಗನೇ ಗದ್ದುಗೆಗೇರುವುದು ನ್ಯಾಯವಲ್ಲವೆ ! ಆದರೆ ವಿರೂಪಾಕ್ಷ ಇನ್ನೂ ಹಸುಳೆ. ಹೊಸ ಹರೆಯದ ಕೃಷ್ಣದೇವ ನೈಜ ಉತ್ತರಾಧಿಕಾರಿಯನ್ನು ಬದಿಗೊತ್ತಿ ಗದ್ದುಗೆಯೇರುವನೆಂಬ ಶಂಕೆಯ ಸಬಳ ನನ್ನ ಹೃದಯವನ್ನು ಇರಿಯುತ್ತಿದೆ. ಕೃಷ್ಣನ ಕಣ್ಗಳನ್ನು ಕೀಳಿಸು. ಅಂಧ ಅರಸನನ್ನು ಯಾವ ಪ್ರಜಾಸ್ತೋಮವೂ ಅಂಗೀಕರಿಸದು.'

ಸಾಳುವ ತಿಮ್ಮ ಬೆಚ್ಚಿದನು. ಕರ್ಣಾಟಕ ಸಾರ್ವಭೌಮನಲ್ಲಿ ಇಂಥ ಅಧಮತೆಯೆ ? ನೈಜ ನೃಪತಿ ಸಾಳುವ ನರಸಿಂಹರಾಜನನ್ನು ಮೂಲೆಗೊತ್ತಿ ರಾಜ್ಯಾಪಹಾರವೆಸಗಿದ ವೀರನರಸಿಂಹನಲ್ಲಿ ಇಂಥ ಬಯಕೆ ಅಚ್ಚರಿಯೆ! ಚತುರನೂ,

ಗಾಢ ಲೋಕಾನುಭವಿಯೂ, ಸಾಮ್ರಾಜ್ಯದ ಅಸೀಮ ಸೇವಕನೂ ಆದ ಮಂತ್ರಿ ತನ್ನಂತರಂಗವನ್ನು ವ್ಯಕ್ತಪಡಿಸದೆ 'ಅಪ್ಪಣೆ, ಪ್ರಭು' ಎಂದನು.

'ನಾ ಮರಣಸಂಕಟದಿಂದ ಕ್ಷೋಭೆಗೊಂಡಿದೇನೆ. ಕೃಷ್ಣನ ಕಣ್ಣುಗಳನ್ನು ಕಾಣುವವರೆಗೆ ನನ್ನ ಕಣ್ಣು ಮುಚ್ಚದು.' ಅರಸನ ಗೋಳ್ಧ್ವನಿ ಮೂಡಿತು.

ಸಾಳುವ ತಿಮ್ಮ ನಿರ್ಗಮಿಸಿದನು. ಕೃಷ್ಣದೇವನಲ್ಲಿ ಬಾಲ್ಯದಿಂದಲೂ ಮಂತ್ರಿಗೆ ತುಂಬ ಪ್ರೇಮ. ಅವನ ಸದ್ಗುಣಗಳನ್ನು ಮನಸಾರೆ ಮೆಚ್ಚಿ, ವೀರನರಸಿಂಹನ ಬದಲು ಕೃಷ್ಣದೇವನೇ ಅರಸಾಗಿದ್ದರೆ ಲೇಸಿತ್ತೆಂಬ ಭಾವನೆಯುಳ್ಳವನು. ಎಳೆಯ ವಯಸ್ಸಿನ ವಿರೂಪಾಕ್ಷನ ಪಕ್ಷಪಾತಿಯಾಗಿ ಕೃಷ್ಣದೇವನ ಕಣ್ ಕೀಳಿಸುವುದು ಸಾಳುವ ತಿಮ್ಮನಿಗೆ ಸರ್ವಥಾ ಒಪ್ಪದು. ತನ್ನ ಸದನವನ್ನು ಸೇರಿದಕೂಡಲೆ ಕೃಷ್ಣದೇವನನ್ನು ಕರೆಕಳುಹಿದ. ಕೃಷ್ಣನಿಗೆ ಸಾಳುವ ತಿಮ್ಮನೆಂದರೆ ತಂದೆಯಂಥ ಆದರ, ಗೌರವ; ನಗುನಗುತ ಬಂದವನು 'ಅಪ್ಪಾಜಿ. ಅಷ್ಟೊಂದು ತ್ವರಿತವೇನು !' ಎಂದ.

ಎಂದಿನಂತೆ ಸಾಳುವ ತಿಮ್ಮನ ಹಸನ್ಮುಖ ಕೃಷ್ಣದೇವನನ್ನು ಸ್ವಾಗತಿಸಲಿಲ್ಲ; ಭ್ರುಕುಟಿಬದ್ಧನಾಗಿ, ಚಿಂತಾಕುಲನಾಗಿ ಕೃಷ್ಣನ ಸುಂದರ ಮುಖಮಂಡಲವನ್ನು ದಿಟ್ಟಿಸಿದ.

'ಹಲವರಿಗೆ ಸದ್ಗುಣ, ಸಾಮರ್ಥ್ಯ, ಶ್ರೇಯಸ್ಸಿಗೆ ಕಾರಣವಾದರೆ ಕೆಲವರಿಗೆ ವಿನಾಶಕ್ಕೆ ಕಾರಣ'

'ಅಂಥ ಸಂದರ್ಭವೇನು, ಅಪ್ಪಾಜಿ ?'

'ನೀನು ಕರ್ಣಾಟಕ ಸಾಮ್ರಾಜ್ಯಕ್ಕೆ ಮುಂದಿನ ಅಧಿಪತಿಯಾದೀಯೆಂಬ ಈರ್ಷೆಯಿಂದ ನಿನ್ನ ಕಣ್ಣುಗಳನ್ನು ಕಿತ್ತುತಾರೆಂದು ಮಹಾರಾಜ ಆಣತಿಸಿದಾನೆ.'

'ತಂದೆಯ ಅಭಿಲಾಷೆ ನನ್ನನ್ನೇ ಸಾಮ್ರಾಜ್ಯದ ಸರ್ವಾಧಿಕಾರಿಯನ್ನಾಗಿಸಬೇಕಿತ್ತು. ಅಧಿಕಾರದ ಆಕಾಂಕ್ಷೆ

ಯಿಲ್ಲದೆ ಜ್ಯೇಷ್ಠನಿಗೇ ಸಮಸ್ತ ವೈಭವವನ್ನೂ ಪಾಲಾಗಿಸಿದೆ. ಇಂದು ನನಗೆ ಸಿಂಹಾಸನದ ಹಂಬಲವೆ! ವಿರೂಪಾಕ್ಷ ನನ್ನೇ ಸಿಂಹಾಸನಾರೂಢನಾಗಿಸುವೆನೆಂಬ ನನ್ನ ಭರವಸೆಯನ್ನು ಅಣ್ಣನಿಗೆ ತಿಳಿಸು. ತಂದೆಯಂತಿದ್ದ ನಿನಗೆ ನನ್ನ ಕಣ್‌ಕೀಳಿಸಲು ಮನ ಹೇಗೆ ಬಂದೀತು!'

'ಕುಮಾರ! ರಾಜಾಜ್ಞೆ ಪರಿವರ್ತಿಸದು'

'ಸಾಮ್ರಾಜ್ಯದ ಕ್ಷೇಮಕ್ಕಾಗಿ ನಾ ಸನ್ಯಾಸವನ್ನೇ ಸ್ವೀಕರಿಸಿ, ಸಿಂಹಾಸನವನ್ನು ಮಾತ್ರವಲ್ಲ ಐಹಿಕ ಜಗತ್ತನ್ನೇ ಪರಿತ್ಯಾಗಮಾಡುವೆನೆಂದು ಅಣ್ಣನಿಗೆ ತಿಳಿಸು.' ಕೃಷ್ಣದೇವನ ಮೊಗ ದೃಢಸಿರ್ಧಾರದಿಂದ ಗಡಸಾಯಿತು.

ಬದ್ಧಭ್ರುಕುಟಿಯಾಗಿದ್ದ ಸಾಳುವ ತಿಮ್ಮ ಫಕ್ಕನೆ ನಕ್ಕನು. 'ಕುಮಾರ. ಅರಸ ಈರ್ಷೆಯಿಂದ ಅಂಧನಾಗಿದ್ದರೆ, ಮಂತ್ರಿ ನಾಡಿನ ಹಿತವನ್ನು ಬಲಿಗೊಡುವನೆಂದು ಭಾವಿಸಿದೆಯೇನು! ಸಾಮ್ರಾಜ್ಯಲಕ್ಷ್ಮಿ ನಿನ್ನಿಂದಲೇ ವೈಭವ ಶಿಖರ ವನ್ನೇರಬೇಕಾಗಿದೆ. ನಿನ್ನ ಕಣ್‌ಕಿತ್ತು ಸಾಮ್ರಾಜ್ಯಲಕ್ಷ್ಮಿಯನ್ನು ಅಂಥ ಭಿಕ್ಷುಕಿಯಾಗಿಸಲಾರೆ. ಕುಮಾರ! ನಾ ಆಜ್ಞಾಭಂಗ ಮಾಡಿದೆನೆನುವುದು ಅರಸನಿಗೆ ಅರಿವಾದರೆ ನಮ್ಮಿಬ್ಬರಿಗೂ ಅಪಾಯ ಖಂಡಿತ. ಅರಸನ ಅವಸಾನದವರೆಗೆ ನನ್ನ ಒಳಮನೆಯೆ ನಿನಗೆ ಆವಾಸ.'

ಮಂತ್ರಿಗೃಹದ ಗುಪ್ತ ಕೊಠಡಿಯಲ್ಲಿ ಕೃಷ್ಣದೇವ ಸೇರಿಕೊಂಡ. ಸಾಳುವ ತಿಮ್ಮನ ನಿರ್ದೇಶದಂತೆ ಆಡಿನ ಎರಡು ಕಣ್ಗಳು ಕಿತ್ತುತರಲ್ಪಟ್ಟವು. ಹೊನ್ನ ಭರಣಿಯಲ್ಲಿ ಅವನ್ನಿಟ್ಟುಕೊಂಡು ಮಂತ್ರಿ ಅರಮನೆಗೆ ಸಾಗಿದ.

ಮುತ್ತುವಜ್ರಗಳ ಕುಸುರಿ ಕೆಲಸಮಾಡಿದ ಸ್ವರ್ಣಮಂಚದಲ್ಲಿ ನರಳುತ್ತ ಹೊರಳಾಡುತ್ತಿದ್ದ ವೀರನರಸಿಂಹ ಮಂತ್ರಿಯ ಮೊಗವನ್ನು ಕಂಡೊಡನೆಯೆ ಸ್ತಬ್ಧನಾಗಿ 'ಬಾ, ಮಂತ್ರಿ, ಬಾ! ಬಾ, ನಿಸ್ಸೀಮ ರಾಜನಿಷ್ಠ, ಬಾ!' ಎಂದನು.

ಸಾಳುವ ತಿಮ್ಮ ಹೊನ್ನ ಭರಣಿಯನ್ನು ಮುನ್ನೀಡಿ, ತೆರೆದು ತೋರಿದನು. ವ್ಯಾಧಿಗ್ರಸ್ತನಾಗಿ, ಮರಣಾಸನ್ನನಾಗಿ, ನೇತ್ರಪಾಟವ ಕಡಿಮೆಯಾಗಿ ಇದ್ದ ಅರಸ ಅವು ಕೃಷ್ಣನ ಕಣ್ಗಳೆಂದೇ ನಂಬಿದ; ನಂಬಿ ಸಂತೃಪ್ತನಾದ. 'ವಿರೂಪಾಕ್ಷನ ಹಾದಿಯಲ್ಲೊರಗಿದ್ದ ಘಟಸರ್ಪದ ವಿಷದಂತವನ್ನು ಕಿತ್ತೆಸೆದ ಮಂತ್ರಿವರ್ಯ! ವಿರೂಪಾಕ್ಷ ವಯಸ್ಕನಾಗುವವರೆಗೆ ರಾಜನನ್ನೂ ರಾಜ್ಯವನ್ನೂ ಸಂರಕ್ಷಿಸುವ ಹೊಣೆ ನಿನ್ನದೇ ಸರಿ.'

ಮಂತ್ರಿ ಅರಮನೆಯಿಂದ ನಿರ್ಗಮಿಸಿದ ತುಸು ಕಾಲಾನಂತರ ಅರಸನ ಅವಸಾನದ ವಾರ್ತೆಯೂ ಅರಮನೆಯಿಂದ ಹೊರಬಂತು. ನಾಗರಿಕರೂ, ಸಾಮ್ರಾಜ್ಯದ ಅಧಿಕಾರಿಗಳೂ ಅಸಮರ್ಥ ಅರಸನ ಅಳಿವಿನಿಂದ ಸಮಾಧಾನಗೊಂಡರು; ಎಲ್ಲರಿಗಿಂತಲೂ ಹೆಚ್ಚು ಸಂತೃಪ್ತನಾದವನೆಂದರೆ ಸಾಳುವ ತಿಮ್ಮ. ಸಮಸ್ತ ವೈಭವದೊಂದಿಗೆ ಕೃಷ್ಣದೇವ ರಾಜ್ಯಾಭಿಷಕ್ತನಾದಾಗ ಜನತೆ ಸಂತೃಪ್ತವಾಯಿತು.

ವಿರೂಪಾಕ್ಷನ ಬಳಗದವರೂ, ವಿರೂಪಾಕ್ಷ ರಾಜನಾದರೆ ಅಧಿಕತರ ಅಧಿಕಾರ ಪ್ರಾಶಸ್ತ್ಯ ದೊರೆಯುವ ನಿರೀಕ್ಷೆಯುಳ್ಳವರೂ ಕೃಷ್ಣದೇವರಾಯನ ಸಿಂಹಾಸನಚ್ಯುತಿಗಾಗಿ ಒಳಸಂಚು ಮಾಡುವ ಸುಳಿವು ಹರಿಯಿತು ಸಾಳುವ ತಿಮ್ಮನಿಗೆ. ಸಾಮ್ರಾಜ್ಯಲಕ್ಷ್ಮಿಯ ಸುಂದರಕಾಯವನ್ನು ಛಿನ್ನವಿಚ್ಛಿನ್ನವಾಗಿಸಬಹುದಾದ ಕರಾರಿಯನ್ನು ಮುರಿದೆಸೆಯಲು ಮಂತ್ರಿ ತವಕಗೊಂಡನು. ತಮ್ಮ ಕೃಷ್ಣದೇವರಾಯನಿಂದ ವೀರನರಸಿಂಹ ದಿಗಿಲುಗೊಳ್ಳಬಹುದಿದ್ದಂತೆ, ಕೃಷ್ಣದೇವರಾಯನಿಗೂ ತಮ್ಮಂದಿರಾದ ಅಚ್ಯುತರಾಯ ರಂಗರಾಯರಿಂದ ಒಂದಲ್ಲ ಒಂದುದಿನ ಅಪಾಯ ಸಂಭವಿಸೀತು. ವೀರನರಸಿಂಹನಾಗಲೆ ಸಾಳುವ ವಂಶಜರನ್ನು ಬದಿಗೊತ್ತಿ ಸಿಂಹಾಸನವೇರಿದ್ದು, ಇದರಂತೆ ತನ್ನ ಮಗನನ್ನು ಮೂಲೆಗೊತ್ತಿ ತಮ್ಮನೆಲ್ಲಿ ಅರಸನಾದಾನೋ ಎಂದು ದಿಗಿಲುಪಟ್ಟಿದ್ದನು. ಅದೇ ಅನುಕ್ರಮದಲ್ಲಿ ವಿರೂಪಾಕ್ಷ, ಅಚ್ಯುತರಾಯ, ರಂಗರಾಯರಿಂದ ಕೃಷ್ಣದೇವರಾಯನಿಗೆ ಅಪಾಯತಗುಲದಿರುವಂತೆ ಎಚ್ಚರವಹಿಸಲು ಮಂತ್ರಿ ಈ ಮೂವರನ್ನೂ ದೂರದ ಚಂದ್ರಗಿರಿ

ಕೋಟೆಯಲ್ಲಿ ಇರಿಸಿದನು; ರಾಜವಂಶಜರಿಗೆ ಉಚಿತ ಸುಖಭೋಗಗಳಲ್ಲಿ ಇಡಲ್ಪಟ್ಟಿದ್ದ ಇವರು ರಾಜಬಂದಿಗಳು. ಸ್ವಸ್ಥಾನ ಭದ್ರಗೊಂಡುದು ದೃಢವಾಗಲು, ಕೃಷ್ಣದೇವರಾಯ ಸಾಮ್ರಾಜ್ಯವನ್ನು ದೃಢಗೊಳಿಸುವ ಯತ್ನವನ್ನು ಕೈಗೊಂಡನು; ಅಣ್ಣನ ಆಳ್ವಿಕೆಯಿಂದ ಉಂಟಾಗಿದ್ದ ಅನಾಯಕತೆ, ಅದೃಢತೆ, ಪ್ರಜಾಕ್ಷೋಭೆಗಳನ್ನು ನಿವಾರಿಸುವುದೆ ತನ್ನ ಪ್ರಥಮ ಕರ್ತವ್ಯವೆಂದು ಮನಗಂಡನು.

ಕೃಷ್ಣದೇವರಾಯ ಸರಳ, ಸಹೃದಯಿ, ಉದಾರಿ, ಮಹತ್ವಾಕಾಂಕ್ಷಿ. ಅಣ್ಣನಂತೆ ವಿಲಾಸಿಯಾಗಿ ಬದುಕು ನೀಗಿ ಪ್ರಜಾಕ್ಷೋಭೆಯುಂಟುಮಾಡುವುದು ಅವನಿಗೆ ಸರ್ವಥಾ ಅಮಾನ್ಯ. ಸಮಗ್ರ ಭಾರತವನ್ನು ಕಲಕಿ ಉರವಣೆ ಗೊಳಿಸುತ್ತಿದ್ದ ಮುಸಲ್ಮಾನರ ಪೀಡೆಯಿಂದ ದಕ್ಷಿಣವನ್ನು ಉದ್ಧರಿಸುವ ಹೆಬ್ಬಯಕೆಯಿಂದ ವಿಜಯರಾಜ್ಯಸ್ಥಾಪನೆ ಮಾಡಿದ ಹರಿಹರನ ಉದಾತ್ತ ಧ್ಯೇಯವನ್ನು ಕೃಷ್ಣದೇವರಾಯ ಮನಸಾರೆ ಮೆಚ್ಚಿದ್ದನು. ಸಮಗ್ರ ಭಾರತಕ್ಕೆಲ್ಲ ಏಕೈಕವಾಗಿದ್ದ ಈ ಹಿಂದೂ ರಾಜ್ಯವನ್ನು ಅಪೂರ್ವ ವೈಭವದಿಂದ ವಿಜೃಂಭಿಸಬೇಕು; ಈ ರಾಜ್ಯದ ಹಿಂದಿನ ಅರಸರನ್ನೆಲ್ಲ ಮೀರಿಸಿದ ತೇಜಸ್ವಿಯೂ ಪ್ರಬಲನೂ ತಾನಾಗಬೇಕು; ಎಂಬುದು ಕೃಷ್ಣದೇವರಾಯನ ಆಕಾಂಕ್ಷೆ. ರಾಜ್ಯಾಡಳಿತದ ಪರಿಚಯ ಮಾಡಿಕೊಳ್ಳಲು ಹಿಂದಿನ ಲೇಖಪತ್ರಗಳನ್ನೆಲ್ಲ ಪರಿಶೀಲಿಸುತ್ತಿದ್ದಾಗ ಸಾಳುವ ನರಸಿಂಹನ ಮರಣ ಶಾಸನ ದೊರೆತಿತು; ಪರಾಕ್ರಾಂತವಾದ ಗಡಿನಾಡಿನ ರಾಯ್ಚೂರು, ಮುದಗಲ್ಲು, ಉದಯಗಿರಿ ಕೋಟೆಗಳ ಪುನರ್ವಶೀಕರಣ ದಲ್ಲಿ ಸಾಳುವ ನರಸಿಂಹ ಅಯಶಸ್ವಿಯಾಗಿದ್ದು, ತನ್ನ ಅನಂತರ ಗದ್ದುಗೆಯೇರಿದವರು ಸಾಧಿಸಿ ಜಯಿಸಬೇಕೆಂದು ನಿರ್ದೇಶಿಸಿದ್ದನು. ಪೂರ್ವಿಕನ ಬಯಕೆಯನ್ನು ತಾನೇ ಈಡೇರಿಸುವುದಾಗಿ ಕೃಷ್ಣದೇವರಾಯನ ಸಂಕಲ್ಪ.

ಸಂಕಲ್ಪಸಿದ್ಧಿಗಾಗಿ ರಾಯ ವೀರನರಸಿಂಹನ ಕಾಲದಲ್ಲಿ ಬರಿದಾಗಿದ್ದ ವಿಜಯನಗರದ ಕೋಶಾಗಾರ, ಶಸ್ತ್ರಾಗಾರ ಗಳನ್ನು ತುಂಬಿಸಿದನು. ಪದಾತಿಪಳಗಳನ್ನು ತನ್ನಿಚ್ಛೆಯಮೇರೆಗೆ ವರ್ಧಿಸಬಹುದಿದ್ದರೂ ಅಶ್ವಸೇನೆಗೆ ವಿದೇಶಗಳಿಂದ

ಜಾತ್ಯಶ್ವಗಳು ಬರಬೇಕಿತ್ತು. ಅಶ್ವವ್ಯಾಪಾರ ಹೆಚ್ಚಾಗಿ ಪೋರ್ಚುಗೀಸರ ಹಿಡಿತದಲ್ಲಿ. ಉತ್ತರದ ಸುಲ್ತಾನರಿಗೂ ವಿಜಯನಗರದ ರಾಯರಿಗೂ ಉಂಟಾಗುತ್ತಿದ್ದ ತಿಕ್ಕಾಟದಲ್ಲಿ ಪೋರ್ಚುಗೀಸರ ನೆರವು ದೊರೆತ ಪಕ್ಷವೇ ಹೆಚ್ಚು ಕದುರೆ ಗಳನ್ನು ಪಡೆದು ಅಶ್ವಸೈನ್ಯದ ಹೆಚ್ಚಳದಿಂದ ಬಲಿಷ್ಠತರವಾಗುತ್ತಿತ್ತು. ರಾಯ ಸಮಯಸಾಧಿಸಿ ಪೋರ್ಚುಗೀಸರ ಸ್ನೇಹ ಬಳೆಸಿದನು. ಹೀಗೆ ವಿದೇಶಿ ಅಶ್ವಗಳ ಸರಬರಾಯಿಯೂ, ಪೋರ್ಚುಗೀಸರ ಸುಸನ್ನದ್ಧ ಸೇನೆಯ ನೆರವೂ ನಿಶ್ಚಿತ. ಪೋರ್ಚುಗೀಸರ ತುಪಾಕಿ, ಫಿರಂಗಿಗಳ ಕೈಚಳಕ ರಾಯನಿಗೆ ಮುಂದೊದಗಿದ ಸಮರಗಳಲ್ಲಿ ವಿಶೇಷ ಲಾಭದಾಯಕ ವಾಯ್ತು ; ಅಲ್ಲದೆ, ।ಪೋರ್ಚುಗೀಸ್ ಯಂತ್ರಶಿಲ್ಪಿಗಳು ವಿಜಯಸಾಮ್ರಾಜ್ಯದಲ್ಲಿ ನೀರಾವರಿ ಮುಂತಾದ ಹಲವು ಜನೋಪಯುಕ್ತ ಕಾರ್ಯಗಳ ನಿರ್ಮಾಣಕ್ಕೆ ಕಾರಣಭೂತರಾದರು. ರಾಯ ಅರಿರಾಜರಮೇಲೆ ದಾಳಿಮಾಡುವ ಮುನ್ನ ಸ್ವಶಕ್ತಿ ಪರೀಕ್ಷೆಯ ಪ್ರಯೋಗಾರ್ಥವೆಂಬಂತೆ, ಉದ್ಧಟರಾಗಿದ್ದ ಕೆಲವು ಸಣ್ಣಪುಟ್ಟ ನಾಯಕರ ಮೇಲೆ ದಂಡೆತ್ತಿಹೋದನು.

ವಿಜಯನಗರದ ಆಶ್ರಿತ, ಉಮ್ಮತ್ತೂರ ಅಧಿಪತಿ ಮಲ್ಲರಾಯ ಉದ್ಧಟನಾಗಿ, ಸ್ವತಂತ್ರನೆಂದು ಘೋಷಿಸಿ ಕೊಂಡಿದ್ದನು. ಕಾವೇರೀಜಲಪಾತದ ಬಳಿಯ ಶಿವಸಮುದ್ರದ್ವೀಪವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ಮಲ್ಲರಾಯ ಪೆನುಗೊಂಡೆಯನ್ನು ಜಯಿಸಿ ಚಕ್ರೇಶ್ವರನೆಂಬ ಬಿರುದು ತಳೆದನು. ಸಾಮ್ರಾಜ್ಯಾಂತರ್ಗತ ರಾಜ್ಯಾಧಿಪರು ಸ್ವತಂತ್ರರಾಗಿ ವರ್ತಿಸುವುದು ಸಾಮ್ರಾಜ್ಯವೃಕ್ಷಮೂಲಕ್ಕೆ ಕುಠಾರಪ್ರಾಯ. ಮಲ್ಲರಾಯನನ್ನು ಬಗ್ಗು ಬಡಿಯಲು ಕೃಷ್ಣದೇವರಾಯ ಪಡೆಗೊಂಡು ಮುನ್ನುಗ್ಗಿ, ಒಂದೇ ದಿನದ ದಾಳಿಯಲ್ಲಿ ಶಿವಸಮುದ್ರಕೋಟೆಯನ್ನು ಸ್ವಾಧೀನಪಡಿಸಿ ಕೊಂಡನು. ಕೋಟೆಯನ್ನು ನೆಲಸಮಮಾಡಲಾಯ್ತು ; ಬಿರುಗಾಳಿಯ ದಾಳಿಗೆ ಸಿಲುಕಿದ ಬಾಳೆಯಗಿಡ ದೊಸಕ್ಕನೆ

ನೆಲಕ್ಕೊರಗಿದಂತಾಯ್ತು. ಮಲ್ಲರಾಯ ಸಮರದಲ್ಲಿ ಮಡಿದನು; ಅವನ ಮಗ ವೀರ ಒಡೆಯನಿಗೆ ರಾಯ ಶ್ರೀರಂಗಪಟ್ಟಣದ ಒಡೆತನವನ್ನು ಒಪ್ಪಿಸಿದನು. ಪೆನುಗೊಂಡೆ ಮತ್ತೆ ವಿಜಯನಗರಕ್ಕೆ ಒಳಪಟ್ಟಿತು. ವಿಜಯಿಯಾದ ಕೃಷ್ಣದೇವರಾಯ ಶ್ರೀರಂಗಪಟ್ಟಣಕ್ಕೆ ಪಯಣಹೊರಟನು, ಕಾವೇರಿಯಿಂದ ಆವೃತವಾದ ಮನೋಹರ ನಗರ ವೀಕ್ಷಣದಿಂದ ರಾಯ ಸಂತುಷ್ಟ; ಶ್ರೀರಂಗಸ್ವಾಮಿಗೆ ವಿಶೇಷ ವೈಭವದಿಂದ ಪೂಜೆಪುರಸ್ಕಾರಗಳನ್ನು ಸಲ್ಲಿಸಿ ಪುಳಕಿತನಾದನು.





## ಆಳೌ ಕರ್ನಾಟಕದೇವಿ

ರಣಕಹಳೆ ಮೊಳಗುವ ಮೊದಲು ವಿಶೇಷ ಪೂರ್ವಸಿದ್ಧತೆ ಅತ್ಯವಶ್ಯಕ. ಪ್ರತಿ ಮಂಡಲಾಧಿಪತಿಯೂ ಅಧಿಕಾರಿಯೂ ನಿಯಮಿತ ಸೇನಾಬಲವನ್ನು ಸದಾಸನ್ನದ್ಧವಾಗಿ ಇರಿಸಿಕೊಳ್ಳಬೇಕೆಂದು ರಾಯನ ಕಟ್ಟಾಣತಿ; ಇಲ್ಲದಿದ್ದಲ್ಲಿ ಅರಮನೆಯ ಬೊಕ್ಕಸಕ್ಕೆ ಹೇರಳ ಪರಿಹಾರದ್ರವ್ಯ ಕೊಡಬೇಕಿತ್ತು. ಕರ್ನಾಟಕ ಸಾಮ್ರಾಜ್ಯದ ಹದಿನೆಂಟೂ ಪ್ರಾಂತಾಧಿಕಾರಿಗಳು, ನಾಯಕರು ರಾಜಧಾನಿಗೆ ಕರೆಕಳಿಸಲ್ಪಟ್ಟರು; ಈ ಎಲ್ಲರೂ, ಇತರ ರಾಜ್ಯಾಧಿಕಾರಿಗಳೂ ಅರಮನೆಗೆ ಭೋಜನಕೂಟಕ್ಕೆ ಆಹ್ವಾನಿತರಾದರು. ತೇಜಸ್ವಿಯಾದ ತರುಣಮಹಾರಾಜನ ಸಾಮ್ರಾಜ್ಯವಿಸ್ತರದ, ಶತ್ರುದರ್ಪನಿರ್ಮೂಲನದ ಮಹತ್ವಾಕಾಂಕ್ಷೆಯಿಂದ ಆಹ್ವಾನಿತಅಧಿಕಾರಿಗಳೆಲ್ಲ ಸ್ಫೂರ್ತಿಗೊಂಡರು. ಹಲವು ಅಬಲ



ಅರಸರ ಆಡಳಿತದ ಅನಂತರ ಸಮರಧುರಂಧರನಾದ ಸಮರ್ಥನೃಪತಿಗೆ ನೆರವಾಗಿ ತಮ್ಮ ತೋಳ್ಬಲವನ್ನು ತೋರಿಸಲು ಎಲ್ಲ ದಳಪತಿ, ನಾಯಕರಿಗೂ ಇನ್ನಿಲ್ಲದ ಉತ್ಸಾಹ ; ಈ ಉತ್ಸಾಹಪ್ರದರ್ಶನದಿಂದ ಕೃಷ್ಣದೇವ ರಾಯ ಹುರಿದುಂಬಿದನು. ತನ್ನ ಗಡಿನಾಡಿಗೆ ಅಂಟಿದ ಶತ್ರುರಾಜ್ಯಗಳಲ್ಲಿ ಹತ್ತು ಹರಿದಾರಿಗಳವರೆಗೆ ಸೇನೆಯನ್ನು ನುಗ್ಗಿಸಿ, ಅದಿಷ್ಟು ಪ್ರದೇಶದಿಂದ ಶತ್ರುಗಳಿಗೆ ಯಾವ ನೆರವೂ ದೊರೆಯದಂತೆ ಜನ, ದನ, ಕುರಿ, ಮೇಕೆಗಳನ್ನು ಅಪಹರಿಸಿಸಿದನು.

ಪ್ರಬಲ ಮಹಾಸೇನೆ ಸನ್ನದ್ಧವಾಯ್ತು. ವೈಭವ ಪೂರ್ಣ, ಸಂಪದ್ಯುಕ್ತ ರಾಜಧಾನಿಯ ಸಂರಕ್ಷಣೆಗೆ ಸಾಕಷ್ಟು ಸೈನ್ಯವನ್ನು ಮುಡಿಪಿಟ್ಟಾಯ್ತು. ಮಂತ್ರಿ ಸಾಳುವ ತಿಮ್ಮ, ದಳಪತಿಗಳು, ದಂಡಾಳುಗಳು, ಸರಬರಾಯಿ ಜನ ಇವರ ಅಗಾಧ ಸಂದಣಿಯೊಂದಿಗೆ ರಾಯ ಜೈತ್ರಯಾತ್ರೆ ಹೊರಟನು.

ಬಲಿಷ್ಠನಾಗುತ್ತಿದ್ದ ರಾಯನಿಂದ ನೆರೆಯ ಬಹಮನೀಸುಲ್ತಾನರೂ, ಉತ್ಕಲದ ಗಜಪತಿಯೂ ದಿಗಿಲು ಗೊಂಡಿದ್ದರು. ತಮ್ಮಲ್ಲೇ ಕಚ್ಚಾಡುತ್ತಿದ್ದ ಸುಲ್ತಾನರು ರಾಯನನ್ನು ಮರ್ದಿಸುವ ಆಕಾಂಕ್ಷೆಯಿಂದ ಒಂದುಗೂಡಿದುದಲ್ಲದೆ ಉತ್ಕಲಾಧಿಪತಿಯನ್ನೂ ತಮ್ಮ ಬಣದಲ್ಲಿ ಸೇರಿಸಿಕೊಂಡರು. ಸುಲ್ತಾನರ ಒಕ್ಕೂಡಿದ ಸೈನ್ಯ ವಿಜಯಸಾಮ್ರಾಜ್ಯದಲ್ಲಿ ನುಗ್ಗಿ ಆಕ್ರಮಣನಡೆಸಬೇಕೆಂದೂ, ಇದು ಸೋತುದೇ ಆದರೆ ಕೃಷ್ಣದೇವರಾಯನ ಸೇನೆ ಕೃಷ್ಣಾನದಿಯನ್ನು ದಾಟಿ

ಗಜಪತಿಯ ರಾಜ್ಯದಲ್ಲಿ ನುಗ್ಗುವುದು ನಿಶ್ಚಿತವಾದ್ದರಿಂದ ಆಗ ಮೊದಲ ಕಾಳಗದಲ್ಲಿ ಶ್ರಮಗೊಂಡ ವಿಜಯಸೇನೆಯನ್ನು ಉತ್ಕಲಸೇನೆ ಬಗ್ಗುಬಡಿಯಬೇಕೆಂದೂ ಅಂಗೀಕಾರವಾಯ್ತು. ಇಂಥ ಅಪೂರ್ವ ಐಕಮತ್ಯದಿಂದ ವಿಶಾಲವಾದ ವಿಜಯಸಾಮ್ರಾಜ್ಯವನ್ನು ಮುಕ್ಕಿ, ಹರಿದು ಹಂಚಿಕೊಳ್ಳಬಹುದೆಂದು ಸುಲ್ತಾನರಿಗೆ ಹಿಗ್ಗು. ಗಡಿನಾಡ ಕೋಟಿ ಕೊತ್ತಳಗಳನ್ನು ಸುಭದ್ರಗೊಳಿಸಿ, ಅಲ್ಲಿಲ್ಲ ಸೈನ್ಯ ಶಸ್ತ್ರ ಆಹಾರಸಾಮಗ್ರಿಗಳನ್ನು ತುಂಬಿಟ್ಟುಕೊಂಡರು. ತಮ್ಮ ಸೀಮೆಯಲ್ಲಿ ಆಗಂತುಕರ ಪ್ರವೇಶದ ಬಗೆಗೆ ಕಠಿಣತೆಗಳನ್ನು ಒಡ್ಡಿ, ಮುನ್ನಪ್ಪಣೆ ಪಡೆದವರಿಗೆ ಮಾತ್ರ ಪ್ರವೇಶ ಕೊಡಲಾಗುತ್ತಿತ್ತು ; ವಿಜಯನಗರದ ಗುಪ್ತಚಾರರ ಚಲನವಲನಕ್ಕೆ ವಿಘ್ನ ತರಲು ಈ ಏರ್ಪಾಟು ; ಆದರೆ ವಿಜಯನಗರದ ಚತುರ ಚಾರರು ಬಹಮನೀರಾಜ್ಯಗಳಲ್ಲೆಲ್ಲ ಪ್ರವೇಶಿಸಿ, ವಾರ್ತಾಸಂಗ್ರಹಮಾಡಿ, ಸಂಗತಿಗಳನ್ನೆಲ್ಲಾ ಪ್ರಭುವಿಗೆ ಅರಿಕೆಮಾಡಿಕೊಳ್ಳುತ್ತಿದ್ದರು.

ಉದ್ಧತನಾದ ಉಮ್ಮತ್ತೂರ ಅಧಿಪತಿಯನ್ನು ಅತ್ಯಲ್ಪಕಾಲದಲ್ಲಿ ನಿಗ್ರಹಿಸಿ ತನ್ನ ಕಸುವನ್ನು ಕಂಡುಕೊಂಡಿದ್ದ ರಾಯ ಬಿಜಾಪುರಸುಲ್ತಾನನಿಂದ ಆಕ್ರಾಂತವಾಗಿದ್ದ ವಿಜಯರಾಜ್ಯದ ಉತ್ತರ ಗಡಿಸೀಮೆಯ ದೆಸೆ ನುಗ್ಗಿದನು. ಪ್ರಬಲಪರಾಕ್ರಮಿ ಅಗಾಧಸೇನಾಬಲ ಕೃಷ್ಣದೇವರಾಯನಿಗೆ ಇದು ಸುಲಭವಾಗಿ ವಶವಾಯಿತು. ವಿಜಯಸೇನೆ ವಿಜಯಾಟ್ಟಹಾಸಮಾಡುತ್ತ ಬಿಜಾಪುರರಾಜ್ಯದಲ್ಲೂ ನುಗ್ಗಿತು ; ಎಲ್ಲೂ ಯಾವ ತಡೆಯೂ ಇರಲಿಲ್ಲ. ವಿಜಯನಗರದ ಮಹಾಸೇನೆ ಬಿಜಾಪುರಕೋಟೆಗೆ ಸಮೀಪವಾಗತ್ತಿದೆಯೆಂಬ ಸುದ್ದಿ ಬಂದೊಡನೆ ಆದಿಲ್‌ಷಹ ತತ್ತರಿಸಿದನು ; ಯುದ್ಧನಿಲ್ಲಲು ತನ್ನ ಅಸಾಮರ್ಥ್ಯವನ್ನು ಪೂರ್ಣ ಮನಗಂಡು ಪರಿವಾರಸಮೇತನಾಗಿ ಬಿಜಾಪುರದಿಂದ ಪಲಾಯನ ಮಾಡಿದನು. ವಿಜಯಸೈನ್ಯ ತೆರವಾಗಿದ್ದ ಬಿಜಾಪುರವನ್ನು ಪ್ರವೇಶಿಸಿತು ; ಆದಿಲ್‌ಷಹನ ಅರಮನೆ ನೆಲಸಮವಾಯ್ತು.

ಸುಲ್ತಾನರೆಲ್ಲ ಪಡೆಗೊಂಡು ಕೃಷ್ಣೆಯ ದಕ್ಷಿಣಕ್ಕೆ ನುಗ್ಗಿ ವಿಜಯರಾಜ್ಯದಲ್ಲಿ ಹಾವಳಿಮಾಡುತ್ತಿದ್ದ ಸುಡುಸುದ್ದಿ

ಬರಸಿಡಿಲಿನಂತೆ ಬಂದೆರಗಿತು. ಶತ್ರುಗಳ ಹಸ್ತಿಸೈನ್ಯ, ಅಶ್ವಸೈನ್ಯ ಶೀಘ್ರಗತಿಯಿಂದ ಚಲಿಸುತ್ತ ವಿಶೇಷ ಪ್ರಜಾಕ್ಷೋಭೆ ಮಾಡುತ್ತಿದ್ದುದರಿಂದ ರಾಯ ಕ್ರೋಧಗೊಂಡನು ; ಶತ್ರುಸೈನ್ಯಮರ್ದನದ ಕ್ಲಿಷ್ಟಕಾರ್ಯದ ಹೊಣೆಯನ್ನು ರಾಮಲಿಂಗನಿಗೆ ಒಪ್ಪಿಸಿದನು. ರಾಮಲಿಂಗ ಎಂಭತ್ತು ಸಹಸ್ರ ಕನ್ನಡಿಗ ಕಟ್ಟಾಳುಗಳನ್ನೊಡಗೊಂಡು ಮದುವೆಯ ದಿಬ್ಬಣವೆಂಬಂತೆ ವಿಜೃಂಭಣೆಯಿಂದ ಬೀಗುತ್ತ ಶತ್ರುಗಳ ದೆಸೆ ಸಾಗಿದನು. ಒದಗಿದ ಅಲ್ಪಕಾಲಿಕ ಸಮರದಲ್ಲಿ ನಾಲ್ಕು ಸಹಸ್ರ ಶತ್ರುಹಯ ಖಂಡತುಂಡಾಗಿ ನೆಲಕ್ಕೊರಗಿದವು ; ಕನ್ನಡ ಕಟ್ಟಾಳುಗಳು ಬೊಬ್ಬಿರಿದು ರಣಕೋಲಾಹಲವೆಸಗಲು ಇನ್ನೂ ನಾಲ್ಕು ಸಹಸ್ರ ಶತ್ರುಹಯ ಭೂಶಾಯಿಯಾದವು. ರಾಮಲಿಂಗ ಶತ್ರುಶಿಬಿರಕ್ಕೆ ನುಗ್ಗಿ, ಡೇರೆಗಳ ಹಗ್ಗಗಳನ್ನು ಕತ್ತರಿಸಿಚೆಲ್ಲಿ, ಕೃಷ್ಣದೇವರಾಯ ಮುನ್ನುಗ್ಗಲು ಸೂಚನೆಗಾಗಿ ಕಹಳೆಗಳನ್ನು ಮೊಳಗಿಸಿದನು. ಐದುಲಕ್ಷ ದಂಡಾಳುಗಳೊಂದಿಗೆ ಅನತಿ ದೂರದಲ್ಲೇ ಸನ್ನದ್ಧನಾಗಿ ಅಲಂಕೃತ ಆನೆಯಮೇಲೆ ಕುಳಿತಿದ್ದ ರಾಯ ರಾಮಲಿಂಗನ ಸೂಚನೆ ಕೇಳಿದೊಡನೆಯೆ ಬಿರುಗಾಳಿಯಂತೆ ಶತ್ರುಗಳ ಮೇಲ್‌ನುಗ್ಗಿ ಧೂಳೀಪಟ ಮಾಡಿದನು. ಮುಸಲ್ಮಾನರ ದುರ್ದೈವದಿಂದ ಈ ವೇಳೆಗೆ ಕೃಷ್ಣೆಯಲ್ಲಿ ನೆರೆ ತುಂಬಿಬಂದಿತ್ತು. ಕೃಷ್ಣೆಗೂ ವಿಜಯಸೇನೆಗೂ ನಡುವೆ ಶತ್ರುಶಿಬಿರ. ರಾಯನ ಸಮಗ್ರ ಸೈನ್ಯದ ಉಪಹತಿಯಿಂದ ಜರ್ಝರಿತವಾದ ಶತ್ರುಹಸ್ತಿಗಳು ದಿಕ್ಕೆಟ್ಟು ಪ್ರವಾಹದಲ್ಲಿ ಧುಮ್ಮಿಕ್ಕಿದವು. ಶತ್ರುಸೇನೆಗೂ ನದಿಗೆ ಹಾರುವುದೊಂದೇ ಮಾರ್ಗ, ಅಧಿಕಭಾಗವೆಲ್ಲ ನೆರೆಯಲ್ಲಿ ಕೊಚ್ಚಿ ಅಳಿಯಿತು. ನದಿಗೆ ಇಳಿದ ಶತ್ರುಹಸ್ತಿಗಳು ಮಾವುತರ ಅಂಕುಶಘಾತಕ್ಕೆ ಸಗ್ಗದೆ ನದಿಯ ನಡುವೇ ನಿಂತವು ; ಮಾವುತರು ಆನೆಗಳನ್ನು ನದಿಯಲ್ಲೇ ಬಿಟ್ಟು, ಆತ್ಮರಕ್ಷಣೆಗಾಗಿ ಈಸಿಹೋದರು. ನದಿಗೆ ಹಾರದೆ ತೀರದಲ್ಲುಳಿದ ಅಲ್ಪಸಂಖ್ಯಾತ ದಂಡಾಳುಗಳು ತೆಪ್ಪಗಳನ್ನೇರಿ, ಪ್ರಯಾಸದಿಂದ ನದಿದಾಟಿ ಪಾರಾದರು. ಸುಲ್ತಾನಸೇನೆಯ ವಿನಾಶ ಸಂಪೂರ್ಣವಾಯ್ತು ; ಶಿಬಿರದಲ್ಲಿದ್ದ ಜಾತ್ಯಶ್ವಗಳೂ, ಶಿಬಿರ ಸಾಮಗ್ರಿಗಳೂ ರಾಯನಿಗೆ ಉಪಲಬ್ಧವಾದವು.

ಅಳಿದುಳಿದ ಶತ್ರುಬಲದ ಬೆನ್ನಟ್ಟಿ ನಿಶ್ಶೇಷಮಾಡುವ ದುಡುಕುತನಕ್ಕೆ ರಾಯ ಎಳಸಲಿಲ್ಲ. ಸನ್ನದ್ಧವಾಗಿದ್ದ ಉತ್ಕಲಸೇನೆ ರಾಯನ ನಿರ್ಗಮನವನ್ನು ಸಾಧಿಸಿ, ವಿಜಯರಾಜ್ಯದಲ್ಲಿ ನುಗ್ಗಿ ಉಪಟಳಕೊಡುವ ಸಾಧ್ಯತೆ ಇದರಿಂದ ನಿವಾರಿತ. ವರ್ಷಕಾಲ ಸಮಾಪ್ತವಾಗಿ, ಕೃಷ್ಣೆಯ ಪ್ರವಾಹ ಇಳಿಮುಖವಾಗುವವರೆಗೂ ಅಲ್ಲೇ ಬೀಡುಬಿಡಲು ರಾಯನ ನಿರ್ಧಾರ.

ಮಳೆಗಾಲ ಮುಗಿವುಗೊಂಡಾಗ ವಿಜಯಸೇನೆ ಗಜಪತಿರಾಜ ಆಕ್ರಮಿಸಿದ್ದ ಉದಯಗಿರಿಗೆ ಮುತ್ತಿಗೆ ಹಾಕಿತ್ತು. ಉದಯಗಿರಿ ಕೋಟೆ ರಾಯ್ಚೂರು ಕೋಟೆಯಂತೆ ಬಹು ಬಲಿಷ್ಠ; ಗಜಪತಿರಾಜನ ಚಿಕ್ಕಪ್ಪ ರಾಹುತರಾಯನೆ ದುರ್ಗಾಧಿಪತಿ. ಅದನ್ನು ಅಧೀನಪಡಿಸಿಕೊಳ್ಳಲು ರಾಯ ಎಸಗಿದ ಯತ್ನಗಳೆಲ್ಲ ನಿಷ್ಫಲ. ಕೋಟೆಯಿಂದ ಒಳ ಹೊರಗೆ ಯಾವ ಓಡಾಟವೂ ನಡೆಯದಂತೆ ತಡೆಗಟ್ಟಿ, ದುರ್ಗವಾಸಿಗಳಿಗೆ ಹೊರಗಿನಿಂದ ಆಹಾರ ಸರಬರಾಯಿ ಆಗದಂತೆ ತಡೆದು, ದುರ್ಗವಾಸಿಗಳು ಉಪವಾಸ ಬಿದ್ದು ಸಾಯುವುದಕ್ಕಿಂತ ಶರಣಾಗತರಾಗುವುದೇ ಲೇಸೆನ್ನುವಂತೆ ಎಸಗಿದರೆ ಮಾತ್ರ ಕೋಟೆ ಅಧೀನವಾಗಬಹುದು. ರಾಯ ನಿರುಪಾಯನಾಗಿ ಸೇನೆಯನ್ನು ಉದಯಗಿರಿ ದುರ್ಗದ ಸುತ್ತಲೂ ಬೀಡು ಬಿಟ್ಟನು. ಶತ್ರುವಿನ ಶರಣಾಗತಿಗಾಗಿ ಕಾಯುತ್ತ ಕಾಯುತ್ತ ಒಂದೂವರೆ ವರ್ಷ ಉರುಳಿ ಹೋದವು. ಕೋಟೆಯ ಬಳಿಗೆ ಹೋಗಲು ದಂಡಾಳುಗಳು ಕಲ್ಲುಗುಡ್ಡಗಳನ್ನು ಕೊರೆದು ಕೊರೆದು ಹಲವು ಹಾದಿ ಮಾಡಿದರು. ಆದರೂ ದುರ್ಗಮವಾದ ದುರ್ಗಭಿತ್ತಿಯ ಬುಡಸೇರಲು ಒಂದೇ ಒಂದು ಕಿರುದಾರಿ; ಒಂದು ಬಾರಿಗೆ ಒಬ್ಬೊಬ್ಬ ಮಾತ್ರ ಹಾದು ಹೋಗುವಷ್ಟು ಕಿರಿದು. ಈ ಕಿರುದಾರಿಯನ್ನೂ ವಿಶಾಲಗೊಳಿಸಲಾಯ್ತು. ದುರ್ಗಭಿತ್ತಿಯ ಬುಡಸೇರುವ ದಾರಿಗಳು ಸಿದ್ಧವಾದ ಕೂಡಲೆ ವಿಜಯಸೇನೆ ಮುನ್ನುಗ್ಗಿತು. ಎರಡು ಬಣದಲ್ಲೂ ವಿಶೇಷ ಜನನಾಶವಾಯ್ತು; ವಿಜಯಸೇನೆ ಹಿರಿದಾಗಿದ್ದು ರಾಯನ ಕೊರಳಿಗೇ ವಿಜಯಮಾಲೆ. ದುರ್ಗವೂ, ದುರ್ಗಾಧಿಪತಿ ರಾಹುತರಾಯನೂ

ಕೃಷ್ಣದೇವರಾಯನ ಕೈವಶ. ದುರ್ಗವು ದುರ್ಗದ ಎತ್ತರದ ಕೊತ್ತಳದಲ್ಲಿ ವಿಜಯನಗರದ ವರಾಹಧ್ವಜ ಏರಿತು.

ದೀರ್ಘ ಪ್ರಯತ್ನಾನಂತರ ಸಾಧಿಸಿದ ವಿಜಯದಿಂದ ರಾಯ ಸಮಾಧಾನಗೊಂಡನು. ಸಾಳುವ ನರಸಿಂಹನ ಮರಣ ಶಾಸನದ ನಿರ್ದೇಶದಂತೆ ಮುದಗಲ್ಲು, ಉದಯಗಿರಿಗಳನ್ನು ಅಧೀನಗೊಳಿಸಿಕೊಂಡಾಯ್ತು. ಆದರೆ ಮಹಾತ್ವಾಕಾಂಕ್ಷಿ ತರುಣ ರಾಜನಿಗೆ ಇದು ಅಲ್ಪ ವಿಜಯ; ತನ್ನ ಪೂರ್ವಿಕರ ಕಾಲದಲ್ಲಿ ಗಜಪತಿರಾಜರು ವಿಜಯ ಸಾಮ್ರಾಜ್ಯದಲ್ಲಿ ನುಗ್ಗಿ ಉಪಟಳವೆಸಗಿದುದಕ್ಕೆ ಮುಯ್ಯಿ ತೀರಿಸಿಕೊಳ್ಳಲು ತಾನೂ ಉತ್ಕಲ ರಾಜ್ಯದಲ್ಲಿ ದಾಳಿಮಾಡ ಬಯಸಿದನು. ದಂಡಾಳುಗಳಿಗೆ ಬಾಕಿಯಾಗಿ ನಿಂತಿಪ್ಪ ಸಂಬಳಸಾರಿಗೆಗಳನ್ನು ಪೂರ್ತಿ ಸಲ್ಲಿಸಿ, ಸಂತುಷ್ಟಿಗೊಳಿಸಿದನು.

ಉತ್ಕಲದ ಪ್ರಮುಖ ನಗರಗಳಲ್ಲೊಂದಾದ ಕೊಂಡವೀಡನ್ನು ವಿಜಯಸೇನೆ ಮುತ್ತಿದಾಗ, ಸಂರಕ್ಷಣೆಗಾಗಿ ಗಜಪತಿ ಐದುಲಕ್ಷ ದಂಡಾಳುಗಳೊಂದಿಗೆ ಧಾವಿಸಿದನು. ವಿಜಯಸೇನೆಯ ಸಣ್ಣ ಭಾಗವೊಂದನ್ನು ಕೊಂಡವೀಡು ಕೋಟೆಯ ಬಳಿ ಬಿಟ್ಟು, ರಾಯ ಉಳಿದ ಸೇನೆಯೊಂದಿಗೆ ಉತ್ಕಲರಾಜನಿಗೆ ಕಾಳಗಕೊಡಲು ಮುಂದಾದನು. ಉಭಯ ಸೈನ್ಯಗಳಿಗೆ ನಡುವೆ ನದಿಯೊಂದು ಅಡ್ಡವಾಗಲು, ಎರಡು ಬಣಕ್ಕೂ ನಿಲುಗಡೆ. ವಿರೋಧಿ ಸೈನ್ಯವೇ ಮುಂಬರಿದು ನದಿ ದಾಟುವಾಗ ಕೊಚ್ಚಿ ಹಾಕುವ ಆಲೋಚನೆಯಿಂದ ಉಭಯ ಸೈನ್ಯಗಳೂ ನದಿಯ ಇಕ್ಕೆಲಗಳಲ್ಲಿ ತಟಸ್ಥವಾಗಿ ನಿಂತವು. ಈ ಅರ್ಥವಿಹೀನ ಪರಿಸ್ಥಿತಿಯಿಂದ ರಾಯನಿಗೆ ಬೇಸರ. ತಾನು ಸೇನೆಯೊಂದಿಗೆ ಎರಡು ಹರಿದಾರಿ ಹಿಮ್ಮೆಟ್ಟುವುದಾಗಿಯೂ, ಗಜಪತಿಯ ಸೇನೆ ಸುರಕ್ಷಿತವಾಗಿ ನದಿದಾಟಿದ ಮೇಲೆ ಕಾಳಗಕೊಡುವುದಾಗಿಯೂ ಹೇಳಿಕಳಿಸಿದನು; ಗಮನವೀಯದೆ ಗಜಪತಿ ಯುದ್ಧಸನ್ನದ್ಧನಾಗತೊಡಗಿದನು. ರಾಯ ನಿರುಪಾಯನಾಗಿ, ಸೇನೆಯೊಂದಿಗೆ ನದಿ ದಾಟಿ

ತೊಡಗಿದನು. ವಿಜಯಸೇನೆ ಸಿಲುಕಿದ ಇಕ್ಕಟ್ಟಿನ ಪರಿಸ್ಥಿಯ ಸಂಪೂರ್ಣ ಲಾಭ ಮಾಡಿಕೊಳ್ಳಲು ಉತ್ಕಲಸೇನೆ ತಟಕ್ಕನೆ ಅಸ್ತ್ರಪ್ರಯೋಗವನ್ನು ಆರಂಭಿಸಿತು. ನದಿಯ ಹಲವು ಕಡೆಗಳಿಂದ ದಾಟುತ್ತಿದ್ದ ವಿಜಯಸೇನೆಯೊಂದಿಗೆ ಘನಘೋರ ಸಂಗ್ರಾಮ ಉಂಟಾಯಿತು. ವೀರಾವೇಶದಿಂದ ಹೋರಾಡುತ್ತಿದ್ದ ವಿಜಯಸೇನೆ, ಶತ್ರು ದುಸ್ಥಿತಿಗೆ ಸಿಲುಕಿದ್ದಾನೆಂದು ಹುರಿಗೊಂಡು ಮೇಲ್ಬಿದ್ದ ಉತ್ಕಲಸೇನೆ: ಉಭಯ ಪಕ್ಷಗಳಿಗೂ ವಿಶೇಷ ಸೈನ್ಯಹಾನಿಯಾಯ್ತು. ಜನನಷ್ಟವನ್ನು ಲೆಕ್ಕಿನದೆ ವಿಜಯಸೇನೆ ಸಾಹಸದಿಂದ ಮುನ್ನುಗ್ಗಿ, ನದಿದಾಟಿ, ಎದುರು ತೀರವನ್ನು ಸೇರಿ ನಿಂತಿತು. ಮತ್ತೆ ಕೈಗೂಡಿದ ಘೋರ ಸಂಗ್ರಾಮದಲ್ಲಿ ವಿಜಯಸೇನೆಯ ಪ್ರಖರ ಹತಿಯಿಂದ ಉತ್ಕಲಸೇನೆ ತಲ್ಲಣಿಸಿತು; ಝುರ್ಝುರಿತವಾಗಿ ಹಿಮ್ಮೆಟ್ಟಿ, ಪಲಾಯನಮಾಡಿತು.

ಕೊಂಡವೀಡುಕೋಟೆಯ ಕಡೆಗೆ ರಾಯನ ದೃಷ್ಟಿ ಹೊರಳಿತು. ಸುಭದ್ರ ಉದಯಗಿರಿ ಕೈಜಾರಿಹೋಗಿದ್ದು, ಈ ದುರ್ಗದ ಸಂರಕ್ಷಣೆಗಾಗಿ ಗಜಪತಿ ವಿಶೇಷ ಸನ್ನಾಹಗಳನ್ನು ಎಸಗಿದ್ದನು. ದುರ್ಗ ರಕ್ಷಣೆಗಾಗಿ ನಿಯಮಿತನಾಗಿದ್ದವನು ಪ್ರಸಿದ್ಧ ದಳಪತಿ ಕೇಶವಪಾತ್ರ; ರಾಜಕುಮಾರ ವೀರಭದ್ರಸೇನ, ರಾಜ ಸಂಬಂಧಿಗಳಾದ ನರಹರಿಪಾತ್ರ ರಾಚಿರಾಜರೂ ಕೇಶವಪಾತ್ರನ ನೆರವಿಗಾಗಿ ಕೊಂಡವೀಡಿನಲ್ಲಿ ನೆಲೆಯಾಗಿದ್ದರು. ಗಜಪತಿ ದುರ್ಗರಕ್ಷಣೆಗಾಗಿ ಆದಿಲ್‌ಷಹನ ನೆರವು ಕೋರಿದ್ದು, ವಿಜಾಪುರದಳಗಳೂ ದಳಪತಿಗಳೂ ಇದರಲ್ಲಿ ಇಡಲ್ಪಟ್ಟಿದ್ದರು. ಭದ್ರದುರ್ಗ ಸುಸನ್ನದ್ಧವಾಗಿ ಭದ್ರತರವಾಗಿರಲು ರಾಯನ ಮುತ್ತಿಗೆ ಎರಡು ತಿಂಗಳವರೆಗೂ ನಿಷ್ಫಲವಾದುದು ಹೆಚ್ಚಲ್ಲ. ಕೊನೆಗೆ ನೂಲೇಣಿಗಳ ನೆರವಿನಿಂದ ಕೋಟೆಯ ಗೋಡೆ ಹತ್ತಿ, ವಿಜಯಸೈನ್ಯ ದುರ್ಗವನ್ನು ಆಕಮಿಸಿತು. ಕೇಶವಪಾತ್ರ, ರಾಜಕುಮಾರ ವೀರಭದ್ರಸೇನ, ನರಹರಿಪಾತ್ರ ರಾಚಿರಾಜರೂ ಕೈಸೆರೆಯಾದರು. ತನ್ನ ಮಗ ವೀರಭದ್ರಸೇನ ರಾಯನ ಕೈಸೆರೆಯಾದ ಸುದ್ದಿ ಕೇಳಿ ಗಜಪತಿ



ರಾಜ ವಿಠ್ಠಲ. ಆದರೆ ರಾಯ ರಾಜಕುಮಾರನ ಪ್ರಾಣ ಹರಣ ಮಾಡದೆ, ಉಚಿತಗೌರವದಿಂದ ನಡೆಸಿಕೊಂಡನು.

ಪ್ರಾಣಭಯದಿಂದ ತಲ್ಲಣಿಸಿ ಸೇನಾಸಮೇತ ಓಡುತ್ತಿದ್ದ ಗಜಪತಿಯ ಬೆನ್ನಟ್ಟಿ ಹೋಗಲು ಕೃಷ್ಣದೇವ ರಾಯ ಬಯಸಿ, ಕೊಂಡವೀಡಿನ ಸಂರಕ್ಷಣೆಗಾಗಿ ಸಾಳುವ ತಿಮ್ಮನನ್ನು ನೇಮಿಸಬಯಸಿದನು. ಆದರೆ ಪರರಾಜ್ಯದ ಮಧ್ಯೆ ಸಾಗುವ ಅರಸನಿಗೆ ಬೆಂಬಲವಾಗಿ ತಾನೂ ಸಂಗಡ ಇರುವ ಅಪೇಕ್ಷೆಯಿಂದ ರಾಯಸದ ಕೊಂಡಮರಸಯ್ಯ ನನ್ನು ಕೊಂಡವೀಡಿನ ರಕ್ಷಣೆಗಾಗಿ ನಿಲ್ಲಿಸಿ, ಸಾಳುವ ತಿಮ್ಮ ಅರಸನೊಂದಿಗೆ ಮುನ್ನಡೆದನು.

ಚೈತ್ರಯಾತ್ರೆಗಾಗಿ ಉತ್ಕಲರಾಜ್ಯದಲ್ಲಿ ಅಬ್ಬರದಿಂದ ಮುನ್ನುಗ್ಗಿದ ವಿಜಯಸೈನ್ಯ ಮುಂದಿನ ತಾಣ ಗಳನ್ನು ನಿರಾತಂಕವಾಗಿ ಸ್ವಾಧೀನಪಡಿಸಿಕೊಳ್ಳುತ್ತ ಸಾಗಿತು. ವಿಜಯಸೈನ್ಯ ಹಠಾತ್ತಾಗಿ ಕೊಂಡಪಲ್ಲಿಯ ನೆರೆಯಲ್ಲಿ ಗೋಚರವಾದಾಗ, ಇದನ್ನು ನಿರೀಕ್ಷಿಸಿಯೂ ಇಲ್ಲದ ದುರ್ಗ ರಕ್ಷಕರು ಸಂಭ್ರಾಂತರಾದರು. ಉತ್ಕಲದ ರಾಣಿ, ಯುವರಾಜ ರಾಮಚಂದ್ರದೇವ ಇಲ್ಲಿಯೇ ಇದ್ದುದು. ಕೊಂಡಪಲ್ಲಿ ಸುತ್ತಣ ನಾಯಕರಿಗೆ ನೆಲೆವೀಡಾಗಿದ್ದು ಸಾಕಷ್ಟು ಸನ್ನದ್ಧವಾಗಿತ್ತು. ಗೋಲ್ಕೊಂಡ ಸುಲ್ತಾನನ ಸೈನ್ಯ ಸಹಾಯವೂ ದುರ್ಗದಲ್ಲಿತ್ತು. ಮೂರು

ತಿಂಗಳು ಮುತ್ತಿಗೆ ನಡೆಯಿತು. ಶಸ್ತ್ರಬಲ ನಿಷ್ಪ್ರಯೋಜಕವಾದರೂ, ಸೈನ್ಯಸಂಖ್ಯೆ ಪರಿಣಾಮಕಾರಿ. ಅಧಿಕತರ ಜನವಿದ್ದ ವಿಜಯಸೈನ್ಯವೇ ಕೊನೆಗೆ ವಿಜಯಶಾಲಿ. ಉತ್ಕಲದ ರಾಣಿಯೂ, ಯುವರಾಜ ರಾಮಚಂದ್ರದೇವನೂ ಸೆರೆಯಾದರು. ಕೃಷ್ಣದೇವರಾಯನ ಹಿಗ್ಗು ಹೇಳಲಾಸಲ್ಲ; ಗಜಪತಿಯ ಹೃದಯ ತನ್ನ ಮುಷ್ಟಿಯಲ್ಲಿ ಸಿಲುಕಿದಂತಾಯ್ತು. ಅವರನ್ನು ಉಚಿತ ಗೌರವದಿಂದ ನಡೆಸಿಕೊಂಡರೂ, ಸಂರಕ್ಷಕರನ್ನಿಟ್ಟು ತನ್ನ ರಾಜಧಾನಿಗೆ ರಾಜ ಬಂದಿಗಳನ್ನಾಗಿ ಕಳುಹಿದನು.

ಕೊಂಡವೀಡಿನ ಪತನಾನಂತರ ವಿಜಯಸೈನ್ಯಕ್ಕೆ ಎದುರೇ ಇಲ್ಲ. ಉತ್ಕಲರಾಜ್ಯದಲ್ಲಿ ನಿರ್ವಿಘ್ನವಾಗಿ ಮುಂದೆ ಮುಂದೆ ಸಾಗಿತು. ಸ್ವರಾಜ್ಯದಿಂದ ಬಹು ದೂರ ಮುಂದುವರಿದಾಗ ನೆರೆಯ ಬಿದರ್ ಸುಲ್ತಾನ ಹಿಮ್ಮಗ್ಗಲಿನಿಂದ ಏರಿ ಬಂದಲ್ಲಿ, ಉತ್ಕಲ ಬಿದರ್‌ಗಳ ಸೈನ್ಯಗಳ ನಡುವೆ ವಿಜಯಸೈನ್ಯ ಸಿಕ್ಕು ಅಪಾಯಕ್ಕೊಳಗಾಗುವ ಸಂಭವ. ಈ ಅಪಾಯನಿವಾರಣೆಗಾಗಿ ರಾಯ ಬಿದರ್ ರಾಜ್ಯದ ಮೇಲೆ ದಾಳಿಮಾಡಿದನು. ಸಾಗರದ ವೀಚಿಮಾಲೆಯಂತೆ ಆರ್ಭಟಿಸುತ್ತ ಬಿದರ್ ರಾಜ್ಯವನ್ನು ನುಂಗಲು ನುಗ್ಗುತ್ತಿದ್ದ ವಿಜಯಸೈನ್ಯಕ್ಕೆ ವಿರೋಧವೇ ಇಲ್ಲ; ರಾಜಧಾನಿ ಅಹಮದ್‌ನಗರದ ಕೋಟೆಯ ಹೊರಸುತ್ತುಗಳು ಹಾಹಾ ಅನ್ನುವುದರಲ್ಲಿ ವಶವಾದವು. ನಗರದ ಹೊರವಲಯದಲ್ಲಿ ಉಗ್ರ ಕಾಳಗ ಕೈಗೂಡಿತು. ನಗರದ ರಕ್ಷಣಾಸೇನೆಯ ಸಾಹಸವೆಲ್ಲ ನಿಷ್ಫಲವಾಗಿ ಪರಿಭವದಲ್ಲಿ ಕೊನೆಗಂಡಿತು; ಎದುರು ನಿಂತು ಮಡಿಯುವುದರ ಬದಲು, ಓಡಿ ಅಡಗುವುದೇ ಲೇಸೆಂದು ಭಾವಿಸಿದ ಬಿದರ್‌ಸೇನೆ ಅಹಮದ್‌ನಗರದಿಂದ ಅರ್ಧರಾತ್ರಿಯಲ್ಲಿ ನಿರ್ಗಮಿಸಿ, ಪಲಾಯನಮಾಡಿತು. ತೆರವಾದ ಕೋಟೆಯನ್ನು ವಿಜಯಸೇನೆ ಆಕ್ರಮಿಸಿತು. ವಿಜಯರಾಜ್ಯದಲ್ಲಿ ಬಿದರ್ ಸೈನ್ಯ ಹಿಂದೆಲ್ಲ ನಡೆಸಿದ್ದ ಹಾವಳಿಯಿಂದ ರಾಯ ಸಂತಪ್ತನಾಗಿದ್ದವನು ಪ್ರತೀಕಾರಾಕಾಂಕ್ಷೆಯಿಂದ ಧಗಧಗಿಸುತ್ತಿದ್ದನು; ಕೋಟೆಯ ಗೋಡೆಯನ್ನು ಕೀಳಿಸಿ, ಸಂಪೂರ್ಣ ನೆಲಸಮ

ಮಾಡಿಸಿದನು. ಕೋಟೆಯಿದ್ದ ಪ್ರದೇಶವಲ್ಲಿ ಉಕ್ಕೆ ಹೊಡಿಸಿ ಹರಳು ಬಿತ್ತಿಸಿದನು. ರಾಯನ ಅಸಮ ಪರಾಕ್ರಮದಿಂದ ಸುಲ್ತಾನರೆಲ್ಲ ತತ್ತರಿಸಿದರು.

ಕೃಷ್ಣದೇವರಾಯನ ದೃಷ್ಟಿ ಮತ್ತೆ ಉತ್ಕಲದ ದೆಸೆಗೆ. ಹೀಗೆ ಮುಂದುವರಿದರೆ ಸುಲ್ತಾನರ ಸೈನ್ಯಗಳು ಮತ್ತೆ ಒಟ್ಟುಗೂಡಿ ಕರ್ಣಾಟಕಸೇನೆಯ ಮೇಲೆ ಪಕ್ಕದಿಂದ ಮುಗಿದು ಬೀಳಬಹುದೆಂಬ ದಿಗಿಲು ಸಾಳುವ ತಿಮ್ಮರಸಿಗೆ. ಆದರೆ ಗಜಪತಿಯ ಕೋರೆದಾಡೆಯನ್ನೇ ಕಿತ್ತು ಜೈತ್ರಯಾತ್ರೆಯನ್ನು ಸಂಪೂರ್ಣಗೊಳಿಸುವ ಅಚಲ ಸಿರ್ಧಾರ ರಾಯನದು. ಅರಸನ ಆಕಾಂಕ್ಷೆಯಂತೆ ಕರ್ಣಾಟಕಸೇನೆ ಉತ್ಕಲರಾಜ್ಯದ ಹಾದಿ ಹಿಡಿದು ಪೂರ್ವಘಟ್ಟಗಳನ್ನು ಕ್ರಮಿಸುತ್ತಿದ್ದಾಗ ಅನಿರೀಕ್ಷಿತ ಉಗ್ರ ಸಂಗ್ರಾಮ ಉದ್ಭವಿಸಿತು.

ಓರಂಗಲ್ಲನ್ನು ಆಕ್ರಮಿಸಿದ್ದ ಮಹಮ್ಮದೀಯರನ್ನು ಓಡಿಸಿ, ಪೂರ್ವದ ಹಿಂದೂಮನೆತನವನ್ನು ಸಿಂಹಾಸನದಲ್ಲಿ ಸ್ಥಾಪಿಸಿದ ಚಿತಪ್ರನ ಸ್ನೇಹವನ್ನು ಗಜಪತಿ ಪ್ರಯತ್ನಪೂರ್ವಕವಾಗಿ ಪಡೆದಿದ್ದನು. ಅಪಜಯಪರಂಪರೆಗೆ ಗುರಿಯಾಗಿ ಇನ್ನೂ ದುರ್ಭರ ಸ್ಥಿತಿಗೆ ತುತ್ತಾಗುವಂತೆ ತೋರುತ್ತಿದ್ದ ಗೆಳೆಯ ಗಜಪತಿಯ ಸಹಾಯಾರ್ಥವಾಗಿ ಸರ್ವಪ್ರಯತ್ನ ಮಾಡಲೂ ಸಿದ್ಧನಾಗಿದ್ದ ಸಮರಧುರಂಧರ ಚಿತಪ್ರ ಚತುರನೂ ಆಗಿದ್ದನು. ವಿಜಯನಗರದ ಸಮುದ್ರಸದೃಶ ಮಹಾಸೇನೆಯನ್ನು ಕಾಳಗದ ಬಯಲಿನಲ್ಲಿ ಎದುರಿಸುವುದು ಹುಚ್ಚು ಕೆಲಸವೆಂಬುದು ಚಿತಪ್ರನಿಗೆ ಸಂಪೂರ್ಣ ಮನವರಿಕೆಯಾಗಿತ್ತು. ಬಿದರದ ದಿಗ್ವಿಜಯಾನಂತರ ಉತ್ಕಲದಲ್ಲಿ ಕಾಲಿಡಲು ಕರ್ಣಾಟಕಸೇನೆ ಪೂರ್ವಘಟ್ಟಗಳ ಇಕ್ಕಟ್ಟಿನಲ್ಲಿ ಇಳಿಯುತ್ತಿದ್ದಾಗ ಚಿತಪ್ರನ ಬಿಲ್ಗಾರರು ಬಾಣಗಳ ಸುರಿಮಳೆಗರೆದರು. ಅನಿರೀಕ್ಷಿತ ದಾಳಿಯಿಂದ ಕನ್ನಡ ಕಟ್ಟಾಳುಗಳು ತಲ್ಲಣಗೊಂಡರೂ ಬೇಗನೆ ಪ್ರತಿದಾಳಿಯೀಯಲು ಸಮರ್ಥರಾದರು. ಮಹಾಸಂಖ್ಯೆಯಿಂದ ಬೀಳುತ್ತಿದ್ದ

ಕರ್ಣಾಟಕಸೈನ್ಯ! ಸನ್ನಿವೇಶದ ಅನುಕೂಲತೆಯಿಂದ ಬೊಬ್ಬೆರಿಯುತ್ತಿದ್ದ ಚಿತಪ್ರಸೈನ್ಯ. ಉಗ್ರ ಕಾಳಗ ಕೈಗಟ್ಟಿತು. ಶೀಘ್ರದಲ್ಲಿಯೇ ವಿಜಯಸೈನ್ಯ ಇಕ್ಕೆಲಗಳಿಂದಲೂ ಚಿತಪ್ರಸೈನ್ಯವನ್ನು ಆಘಾತಿಸತೊಡಗಿತ್ತು. ಚಿತಪ್ರಸೈನ್ಯ ನುಚ್ಚು ನೂರಾಯಿತು; ಅವನ ಇಪ್ಪತ್ತುಸಾಸಿರ ಬಿಲ್‌ಗಾರರು ಪೂರ್ವಘಟ್ಟಗಳ ಮಣ್ಣುಪಾಲಾದರು. ಅಳಿದುಳಿದ ಸೇನೆಯನ್ನು ಯಮುನದಾಡೆಗೆ ಗುರಿಮಾಡಬಯಸದೆ, ಚಿತಪ್ರ ಹಿಮ್ಮೆಟ್ಟಿದನು. ವಿಜಯಸೈನ್ಯದ ವಿಜಯದುಂದುಭಿ ಪೂರ್ವಘಟ್ಟಗಳಲ್ಲಿ ಮೊಳಗಿ ಮೊಳಗಿ ಪ್ರತಿಧ್ವನಿತವಾಯ್ತು.





## ಗಜಪತಿಯ ಕುಂಭದಲ್ಲಿ ಕರ್ಣಾಟಕಸಿಂಹನ ನಖ

ಗೆಲುವಿನ ಮೇಲೆ ಗೆಲುವು. ಕೆಲವು ಕಡೆ ವಿಜಯಸೈನ್ಯದ ಆಗಮನಕ್ಕಾಗಿಯೇ ವಿಜಯಲಕ್ಷ್ಮಿ ಕಾತರಗೊಂಡು ಕಾದಿರುವಳು; ಕೆಲವೆಡೆ ವಿಜಯಲಕ್ಷ್ಮಿ ಅಪ್ರಸನ್ನೆಯಾಗಿ ಮೊಗದಿರುಹಿದ್ದರೂ ಕನ್ನಡಕಟ್ಟಾಳುಗಳ ಕಲಿತನದಿಂದ ಸಂತೃಪ್ತಳಾಗಿ ವಿಜಯಮಾಲೆಯನ್ನು ಕೃಷ್ಣದೇವರಾಯನ ಕೊರಳಿಗೆ ಏರಿಸುವಳು. ಉತ್ಕಲಾಧಿಪತಿ ಬಲಿಷ್ಠನಾದರೂ ಕನ್ನಡಕಟ್ಟಾಳುಗಳ ವಿಜಯಪರಂಪರೆಯ ಸುದ್ದಿಯನ್ನು ಪದೇ ಪದೇ ಕೇಳಿ ಕೇಳಿ ಹೌಹಾರಿದ್ದನು. ಗಜಪತಿಗೆ ರಾಯನೆಂದರೆ ಸಿಂಹಸ್ವಪ್ನ. ಬಿದರ್‌ದುರ್ಗ ಉಧ್ವಸ್ತವಾದ ವಾರ್ತೆಯಿಂದ ಪ್ರತಾಪರುದ್ರ ಪ್ರತಾಪಹೀನನಾಗಿ, ರಾಹುನುಂಗಿದ ರವಿಯಂತಾಗಿದ್ದನು. ಕರ್ಣಾಟಕಸೈನ್ಯ ಪೂರ್ವಘಟ್ಟಗಳಿಂದಿಳಿದು ಉತ್ಕಲಸಾಮ್ರಾಜ್ಯದಲ್ಲಿ

ಬಿರುಗಾಳಿಯಂತೆ ಮುಂಸಾಗಿದಾಗ ಪ್ರತಾಪರುದ್ರನ ರುದ್ರಸೈನ್ಯದ ಸುಳಿವೇ ಇಲ್ಲ. ಪ್ರತಾಪರುದ್ರ ಸಿಂಹಾದ್ರಿಯ ಅರಮನೆಯಲ್ಲಿ ಅವಿತುಕೊಂಡು ಮುಂದಾರಿಗಾಣದೆ ತತ್ತರಿಸುತ್ತಿದ್ದನು.

ಕರ್ನಾಟಕಸೇನೆ ಭೂಮಂಡಲವೆಲ್ಲ ತನ್ನದೋ ಎಂಬ ಉಬ್ಬಿನಿಂದ, ಇದು ವಿಜಯಯಾತ್ರೆಯಲ್ಲ ವಿನೋದಯಾತ್ರೆ ಎಂಬ ಹಿಗ್ಗಿನಿಂದ ಸಾಗಿತು. ವಿನೋದೋತ್ಸವದ ಆಹ್ವಾನವಾಗಿ ಅದೋ ಸಿಂಹಾದ್ರಿ! ಉಣಿಸಿಗೆ ಸಿಗುವ ಕುರಿಯನ್ನು ಕಂಡು ಹುಲಿ ಹಿಗ್ಗಿದಂತೆ ಕನ್ನಡಸೇನೆ ಹಿರಿಹಿರಿ ಹಿಗ್ಗಿತು. ಸಿಂಹಾದ್ರಿಗೆ ಅನತಿ ದೂರದಲ್ಲಿದ್ದ ವಿಶಾಲ ಕ್ಷೇತ್ರದಲ್ಲಿ ಬೀಡುಬಿಟ್ಟು ಕೃಷ್ಣದೇವರಾಯ ಕಳಿಂಗರಾಜನಿಗೆ ಯುದ್ಧದೌತಣಕ್ಕಾಗಿ ಆಹ್ವಾನವಿತ್ತು ದೂತರನ್ನು ಕಳುಹಿದನು. ಪ್ರತಾಪರುದ್ರನ ಮಾರುತ್ತರವಿಲ್ಲ. ರಾಯನ ಪಾಳೆಯದಿಂದ ಮತ್ತೆ ಮತ್ತೆ ಕರೆಹೋಯಿತು. ಪ್ರತಾಪರುದ್ರನ ರುದ್ರತೆ ಮೌನದಲ್ಲೆ ಪರ್ಯವಸಾನವಾಯ್ತು. ಕರ್ಣಾಟಕಸೈನ್ಯ ಕಾದು ಕಾದು ಬೇಸತ್ತು ಸಿಂಹಾದ್ರಿಯ ಒಳನುಗ್ಗಿದಾಗ ಪ್ರತಿಭಟನೆಯಿಲ್ಲ; ಅರಮನೆಯಲ್ಲಿ ಅರಸನೇ ಇಲ್ಲ. ಆದರೆ ಹೊಸ ಅರಸು ಬಂದನು; ಕೃಷ್ಣದೇವರಾಯನಿಗೆ ಅದೇ ನಿವಾಸ.

ಉತ್ಕಲದ ಎಷ್ಟೆಷ್ಟೋ ದುರ್ಗ, ನಗರಗಳನ್ನು ಗೆದ್ದು ಮುಗಿದಿತ್ತು. ಹೊಸತೊಂದು ನಗರ ಹಸ್ತಗತವಾದುದರಿಂದ ಮಾತ್ರ ರಾಯ ಸಂತುಷ್ಟನಾಗುವವನಲ್ಲ. ಪ್ರತಾಪರುದ್ರನ ಮೂಲ ಬಲವನ್ನು ಮುರಿದೊಟ್ಟಿ, ಉತ್ಕಲ ರಾಜ್ಯದ ಭಾಗಗಳನ್ನು ಮಾತ್ರ ಗೆದ್ದವನಲ್ಲ, ಉತ್ಕಲ ರಾಜನನ್ನೇ ಜಯಿಸಿದವನು ಎಂಬ ಹಿರಿಮೆಗೆ ಪಾತ್ರನಾಗುವುದು ರಾಯನ ಉದ್ದೇಶ. ಆದರೆ ಉತ್ಕಲದಲ್ಲಿ ತಾನು ಇಷ್ಟು ದೂರ ಆಕ್ರಮಿಸಿ ಬಂದಿದ್ದರೂ ಪ್ರತಾಪರುದ್ರ ಎದುರು ನಿಂತು ಕಾಳೆಗವಿತ್ತುದಿಲ್ಲ. ಈಗ ದೂತರನ್ನು ದೆಸೆದೆಸೆಗೆ ಅಟ್ಟಿ, ಪ್ರತಾಪರುದ್ರನಿಗೆ ಸಮರಾಹ್ವಾನವನ್ನು ಕಳಿಸಿಯಾಯ್ತು. ಪ್ರತಾಪರುದ್ರ ಪಾತಾಳದಲ್ಲಿ ಅಡಗಿದ್ದನೇನೋ ಅವನ ಸುಳಿವೇ ಇಲ್ಲ.

ಶತ್ರು ಗೋಚರನಾಗದೆ ಶತ್ರುವಿಮೋಚನೆ ಅಸಾಧ್ಯ. ಇಷ್ಟದೈವದ ಸೇವೆಯನ್ನಾದರೂ ಮಾಡಿ ಪುಣ್ಯಭಾಗಿಯಾಗಲು ಬಯಸಿದನು ಕೃಷ್ಣದೇವರಾಯ. ಭವ್ಯವಾದ ನರಂಸಿಂಹದೇಗುಲವನ್ನು ಅತ್ಯಲ್ಪ ಕಾಲದಲ್ಲಿಯೆ ವಿನಿರ್ಮಿಸಿದಾಗ, ನೋಟಕರಿಗೆ ಪವಾಡವೊಂದು ಆಚರಿತವಾಯಿತೆಂಬ ಭಾವನೆ ಉಂಟಾಯ್ತು. ದೇಗುಲ ಚಿರಸ್ಥಾಯಿಯಾಗಿ ಶೋಭಿಸಲೆಂದು ಬೇಕಾದಷ್ಟು ದತ್ತಿ ಬಿಟ್ಟನು. ಸಿಂಹಾದ್ರಿಯ ಇತರ ದೇಗುಲಗಳಿಗೂ ದಾನಗಳನ್ನು ನೀಡಿದನು.

ಅಂದು ಇನ ಮೂಡಿ ಬಹುವೇಳೆ ಉರುಳಿದರೂ ರಾಯ ಶಯ್ಯೆಯಿಂದ ಎದ್ದಿರಲಿಲ್ಲ. ಅರಮನೆಗೆ ಆಗಮಿಸಿದ ಕವಿ ಅಲ್ಲಸಾನಿ ಪೆದ್ದನ್ನ ಇನ್ನೂ ರಾಯ ಶಯ್ಯಾಸೀನನಾಗಿರುವುದು ಕಂಡು ಚಕಿತನಾದ.

'ಏಳು ಪ್ರಭುವೆ! ಎಂದಿಲ್ಲದ ಅಲಸಿಕೆಯೇಕೆ?'

'ಕವಿ! ಎದ್ದೇನು ಮಾಡಲಿ!'

'ರವಿಯಾಗಲೆ ನಿದ್ರೆಯಿಂದೆದ್ದು ಅಂಧಕಾರನನ್ನು ಸಂಹರಿಸಿದಂತೆ ನೀನೂ ಉತ್ತಿಷ್ಠಿತನಾಗಿ ಶತ್ರುಗಜಪತಿಯನ್ನು ವಿನಾಶಗೊಳಿಸು.'

'ಎಲ್ಲಿಯ ಶತ್ರು! ಎಲ್ಲಿಯ ವಿನಾಶ! ಶತ್ರುವಿದ್ದರೆ ತಾನೆ ವಿನಾಶ. ನಾವು ಸಿಂಹಾದ್ರಿಯಲ್ಲಿ ಬೀಡುಬಿಟ್ಟು ತಿಂಗಳಮೇಲೆ ತಿಂಗಳಿನಂತೆ ಉರುಳಿಹೋಯ್ತು. ಕಳಿಂಗಾಧಿಪನ ಸುಳಿವಿಲ್ಲ; ಕರೆಯಿತ್ತರೂ ಸುಳಿಯನಲ್ಲ, ಕಾಳಗ ಕೊಡನಲ್ಲ!'

'ನೀ ವಿನಿರ್ಮಿಸಿದ ನರಸಿಂಹದೇಗುಲ ಸವೆದುಹೋದಂದು ಪ್ರತಾಪರುದ್ರ ನಿನಗಭಿಮುಖನಾಗಿ ರಣಕ್ಷೇತ್ರದಲ್ಲಿ ಬಂದು ನಿಲ್ಲುವನು. ಪ್ರಭುವೆ! ಶೃಗಾಲ ಸಿಂಗದೆದುರು ಬಂದು ಯುದ್ಧನಿಂದೀತೆ!'

ಅಂದು ನರಸಿಂಹದೇಗುಲದ ಶಿಲಾಭಿತ್ತಿಯಮೇಲೆ ಶಿಲ್ಪಿ ಕೊರೆದನು :

'ಬಹುಶಃ ಈ ಅಕ್ಷರಗಳು ಅಳಿಸಿಹೋದಮೇಲೆ ಉತ್ಕಲದರಸ ವಿಜಯನಗರದರಸನಿಗೆ ಕಾಳಿಗ ಕೊಡುವನು. ಈ ಅಕ್ಷರಗಳನ್ನು ಉತ್ಕಲದರಸ ಅಳಿಸಿದುದಾದರೆ, ವಿಜಯನಗರದರಸನ ಕುದುರೆಗಳ ಕಾಲ್ಗೆ ಲಾಳ ಹೊಡೆಯುವ ಕಮ್ಮಾರನಿಗೆ ಉತ್ಕಲದರಸನ ಪತ್ನಿಯನ್ನು ಕೊಡಲಾಗುವುದು.'

ಪ್ರತಾಪರುದ್ರನ ತಂದೆ ಪುರುಷೋತ್ತಮ ವಿಜಯನಗರದ ಅಧಿಪತಿ ಸಾಳುವ ನರಸಿಂಹನಿಗೆ ಮಾಡಿದ ಅವಮಾನಕ್ಕೆ ಪ್ರತೀಕಾರವೆಸಗುವುದು ಕೃಷ್ಣದೇವರಾಯನ ಅಭಿಲಾಷೆ. ಸಾಳುವ ನರಸಿಂಹ ವಿಜಯಸಾಮ್ರಾಜ್ಯದ ಸಿಂಹಾಸನಾಕ್ರಮಣ ಮಾಡುವ ಮೊದಲು ಕಂಚಿಯ ಅಧಿಪತಿ. ಸಾಳುವ ನರಸಿಂಹನ ರೂಪವತಿಯಾದ ಕುಮಾರಿಕೆಯನ್ನು ಪಾಣಿಗ್ರಹಣ ಮಾಡಿಕೊಳ್ಳಲು ಪುರುಷೋತ್ತಮ ಬಯಸಿ, ರಾಜಪುತ್ರಿಯನ್ನು ತನಗೆ ವಿವಾಹವಾಗಿನಬೇಕೆಂಬ ಕಟ್ಟಾಣತಿಯನ್ನು ಕಂಚಿಯ ಒಡೆಯನಿಗೆ ಕಳುಹಿದನು. ಪರರಾಜನ ಉದ್ಧಟ ವರ್ತನೆಯಿಂದ ಕ್ರುದ್ಧನಾದ ಸಾಳುವ ನರಸಿಂಹ ಖಂಡಿತವಾಗಿ ನಿರಾಕರಿಸಿದನು. ಪುರುಷೋತ್ತಮ ಅವಮಾನಗೊಂಡು ಕ್ರೋಧಾನಲದಲ್ಲಿ ಪರಿತಪಿಸಿದನು ; ಕಂಚಿಯನ್ನು ಆಕ್ರಮಿಸಿ ಕಂಚಿರಾಜಕುವರಿಯನ್ನು ಬೀದಿಗುಡಿಸುವವನಿಗೆ ಮದುವೆಮಾಡುವುದಾಗಿ ಘೋರ ಪ್ರತಿಜ್ಞೆಮಾಡಿದನು. ಉತ್ಕಲದ ಮಹಾಬಲದೆದುರು ಕಂಚಿಯ ಸೇನೆ ನಿಲ್ಲದಾಯ್ತು. ಕಂಚಿ ಪುರುಷೋತ್ತಮನ ಹಸ್ತಗತ ; ರಾಜಕುವರಿ ಕೈಸೆರೆಯಲ್ಲಿ.

ಈ ವೇಳೆಗೆ ಉತ್ಕಲರಾಜಧಾನಿ ಪುರಿಯಲ್ಲಿ ಕಾಮನಹುಣ್ಣಿಮೆಯ ,ಉತ್ಸವಾಚರಣೆ. ಪುರಿಯ ಜಗನ್ನಾಥ ದೇಗುಲದೆದುರು ಅರಸು ಪುರುಷೋತ್ತಮ ಸಂಪ್ರದಾಯಾನುಸಾರವಾಗಿ ಬೀದಿಗುಡಿಸುವನು. ಅರಸು ಈ ಕಾರ್ಯದಲ್ಲಿ ಉದ್ಯುಕ್ತನಾಗಿದ್ದಾಗ, ಮಂತ್ರಿ ಕಂಚಿರಾಜಕುವರಿಯನ್ನು ಅನಿರೀಕ್ಷಿತವಾಗಿ ಕರೆತಂದು ಅರಸನ ಕೆಲದಲ್ಲಿ ನಿಲ್ಲಿಸಿ, ಆಕೆಯನ್ನು ಮದುವೆನಿಂದು ಪ್ರತಿಜ್ಞಾಪೂರಣವೆಸಗಬೇಕೆಂದು ಬಿನ್ನಯಿಸಿಕೊಂಡನು. ತನ್ನ ದುಡುಕುಪ್ರತಿಜ್ಞೆಗಾಗಿ

ಪಶ್ಚಾತ್ತಾಪದಗ್ಧನಾಗಿದ್ದ ಪುರುಷೋತ್ತಮ ಸಮಸ್ಯೆ ಈ ಬಗೆ ಸುಖಾಂತವಾಗಲು ಅವಕಾಶವಾದುದಕ್ಕಾಗಿ ಸಂತೋಷಿಸಿದನು. ಉತ್ಕಲರಾಜನಿಗೆ ಕಂಚಿರಾಜಕುವರಿಯೊಂದಿಗೆ ವಿವಾಹ ನೆರವೇರಿತು.

ಸಾಳುವ ರಾಜಕುವರಿಯನ್ನು ಬೀದಿ ಗುಡಿಸುವವನಿಗೆ ಮದುವೆ ಮಾಡಿಸುವುದಾಗಿ ಪುರಷೋತ್ತಮ ತೊಟ್ಟ ಪಣಕ್ಕೆ ಪ್ರತೀಕಾರವಾಗಿ ಅವನ ಪುತ್ರ ಪ್ರತಾಪರುದ್ರನ ಪತ್ನಿಯನ್ನು ಕಮ್ಮಾರನಿಗೆ ಮದುವೆ ಮಾಡಿಸುವುದಾಗಿ ಕೃಷ್ಣದೇವರಾಯ ಘೋಷಿಸಿ ಅವಮಾನಪಡಿಸಿದುದು. ಈ ಶಿಲಾಲೇಖದ ವಾರ್ತೆ ಉತ್ಕಲ ಸಾಮ್ರಾಜ್ಯದಲ್ಲೆಲ್ಲ ವ್ಯಾಪಿಸಿತು; ಆದರೂ ಉತ್ಕಲ ರಾಜನ ಸುಳಿವಿಲ್ಲ. ಕೊನೆಗೆ ಬಂತು ಸುದ್ದಿ, ಉತ್ಕಲರಾಜ ಪೊಟ್ಟನೂರಿನಲ್ಲಿ ಅಡಗಿರುವನೆಂದು.

ಬಿರುಗಾಳಿಯಂತೆ ಧೀಂಕಿಟ್ಟು ದಾಳಿಮಾಡುತ್ತ, ಉತ್ಕಲದಲ್ಲಿ ದುರ್ಗದ ಮೇಲೆ ದುರ್ಗವನ್ನು ಆಕ್ರಮಿಸುತ್ತ, ಉಧ್ವಸ್ತಗೊಳಿಸುತ್ತ, ಅಬ್ಬರದಿಂದ ಮುನ್ನುಗ್ಗುತ್ತಿದ್ದ ಕರ್ಣಾಟಕ ಸೇನೆಗೆ ಸಂಗ್ರಾಮಾಭಿಮುಖನಾಗಿ ಅಡ್ಡನಿಲ್ಲುವ ಕಸುವು, ಧೈರ್ಯ, ಸಾಹಸ ಇಲ್ಲದೆ ಗಜಪತಿ ಸುಭದ್ರವಾದ ಪೊಟ್ಟನೂರುದುರ್ಗದಲ್ಲಿ ಅವಿತಿದ್ದನು. ಕೃಷ್ಣದೇವರಾಯ ತನಗಾಗಿ ಕಾದು ಕಾದು ಕಾದು ಹಿಂದಿರುಗಲಿ; ದಾಳಿಮಾಡುವುದೇ ಆದರೆ ತನಗೆ ಭದ್ರಾಶ್ರಯ ನೀಡುವ ದುರ್ಗದಲ್ಲಿ ತಾನಿದ್ದಾಗ ಆಗಲಿ, ಎಂದು ಗಜಪತಿಯ ಆಶಯ. ಉತ್ಕಲದರಸು ಅವಿತಿರುವ ಆಸರೆಯ ಅರಿವು ಉಂಟಾದೊಡನೆಯೆ ಕೃಷ್ಣದೇವರಾಯ ಮೊಲ ಅಡಗಿರುವ ತಾಣ ತಿಳಿವಾದಾಗ ಬೇಟೆನಾಯಂತೆ ಹಿಗ್ಗಿ ನೆಗೆದನು. ಹಲವು ತಿಂಗಳು ಸಿಂಹಾದ್ರಿಯಲ್ಲಿ ವಿಶ್ರಾಂತವಾಗಿ, ವಿನೋದ ವಿಲಾಸಮಗ್ನವಾಗಿದ್ದ ಕರ್ಣಾಟಕ ಸೇನೆ ಸುಖಸ್ವಪ್ನಭರಿತ ದೀರ್ಘನಿದ್ರೆಯಿಂದ ಎದ್ದಂತೆ ಉತ್ಸಾಹಪೂರ್ಣವಾಗಿ ಚೇತನಗೊಂಡು ಮುಂದಡಿಯಿಟ್ಟಿತು. ಪೊಟ್ಟನೂರುದುರ್ಗಕ್ಕೆ ಅನತಿ ದೂರದಲ್ಲಿ ಬೀಡುಬಿಟ್ಟಿತು.

ಲಾಂಗುಲ್ಯನದಿಯ ಪಡುವಣದೆಸೆಯ ಉತ್ಕಲಸೀಮೆಗೆ ಪೊಟ್ಟನೂರು ಪ್ರಮುಖ ಪಟ್ಟಣ; ಜನಭರಿತ; ಸುಭದ್ರ ದುರ್ಗದಿಂದ ಆವೃತ. ಪ್ರತಾಪರುದ್ರನ ಅಳಿದುಳಿದ ಸಮಗ್ರ ಸೇನಾ ಬಲವೂ ಇಲ್ಲಿ ನೆಲೆ; ಆತನ ಸಾಮಂತರಾದ ಹದಿನಾರು ಮಹಾಪಾತ್ರರೂ ರಾಜಾಜ್ಞೆಯಂತೆ ಸ್ವಬಲಸನ್ನದ್ಧರಾಗಿ ಪೊಟ್ಟನೂರಿನಲ್ಲಿ ತಳವೂರಿದ್ದರು. ಕೃಷ್ಣದೇವರಾಯ ವಿಜಯಮತ್ತನಾಗಿದ್ದರೂ ಅರಿಬಲವನ್ನು ಅರಿಯಲಾರದ ಅಂಧನಲ್ಲ. ಅಲ್ಲದೆ ತನ್ನ ನೆಲೆವೀಡಿನಿಂದ ಬಹುದೂರ ಸಾಗಿಬಂದಾಗಿ, ಶತ್ರುರಾಜ್ಯದ ನಟ್ಟನಡುವೆ ಸಿಲುಕಿಯಾಗಿದೆ. ಅಗೋ ಎದುರಿಗೆ ಹಾವಿನ ಪೊಟ್ಟರೆಯಂತಿರುವ ಪೊಟ್ಟನೂರು. ಸರ್ವಸನ್ನದ್ಧವಾದ ಶತ್ರುಸೈನ್ಯದಿಂದ ತಾನು ಪರಾಜಿತನಾದುದಾದರೆ! ಅರಿಕೇಸರಿ, ಸಮರಧುರಂಧರ, ವಿಜಿಗೀಷು ಕೃಷ್ಣದೇವರಾಯ ವಿಜಯಪರಂಪರೆಯ ನಡುವೆ ಪರಾಜಯದ ಸಾಧ್ಯತೆಯನ್ನು ನೆನೆದು ಬೆಚ್ಚಿದನು. ತಾನೀಗ ಪರಾಜಿತನಾದುದಾದರೆ ಕರ್ಣಾಟಕ ಸೇನೆ ಉಧ್ವಸ್ತವಾಗುವುದು; ಮುಗಿಲು ಮುಟ್ಟಲೆಂದು ತಾನು ನಿಲಿಸಿದ ಏಣಿಯ ಮೇಲ್ತುದಿಯಿಂದ ತಾನೇ ಪಾತಾಳಕ್ಕೆ ಕುಸಿತುಬಿದ್ದಂತಾಗುವುದು. ಅಸಾಮಾನ್ಯ ವೈಭವಶಾಲಿ, ಸಂಪದ್ಯುಕ್ತ ವಿಜಯನಗರವನ್ನು ಶತ್ರುಪದಹತಿಗೆ ಒಡ್ಡಿದ ಭೀರುವೆಂಬ ಅಪಕೀರ್ತಿ ತನಗೆ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವುದು. ದುಡುಕು ಜೈತ್ರಯಾತ್ರೆಯಿಂದ ಸರ್ವನಾಶವಾಗುವ ಸಂಭವವುಂಟಾಯ್ತು! ಕರ್ಣಾಟಕ ಸಾಮ್ರಾಜ್ಯಲಕ್ಷ್ಮಿಗೆ ಕರ್ಣಾಟಕಯಶೋಲಕ್ಷ್ಮಿಗೆ ತಾನು ತಿಲಕಪ್ರಾಯನಾಗುವುದರ ಬದಲು ಶೂಲಪ್ರಾಯನಾಗುವಂತಾಯ್ತು! ಮಹಾ ರಾಜಾಧಿರಾಜ ರಾಜಪರಮೇಶ್ವರ ವಿಹ್ವಲನಾದನು.

ಢಣ್‌ಣ್‌ಣ್‌ಣ್ !

ರಾಯನ ಕೈ ಸುವರ್ಣಮಂಚದ ಬದಿಯ ಪೀಠದ ಮೇಲಿದ್ದ ಚರ್ಮದಂಡದಿಂದ ಜಾಗಟೆಯನ್ನು ದನಿಯಿಸಿತು. ಪ್ರತೀಹಾರಿ ಒಡನೆಯೇ ಗೋಚರನಾಗಿ ಬಾಗಿ ನಿಂತನು.

'ಅಪ್ಪಾಜಿಗೆ ಬರಹೇಳು !'

ತನ ಹೇಳಿಯಲ್ಲಿ ಅಪ್ಪಾಜಿ ಆಗಮಿಸಿದ. ಅಪ್ಪಾಜಿ ಚತುರ ಚಾಣಿಕ್ಯನಾಗಿದ್ದಂತೆ ಚೆಲುವ ಚೆನ್ನಿಗನೂ ಹೌದು. ನಡುವಯಸ್ಸಾಗಿದ್ದರೂ ಮೊಗದ ಲಕ್ಷಣ ಇಳಿದಿರಲಿಲ್ಲ. ಧೀರ ಯೋಧನಾಗಿದ್ದು ದೃಢವಾದ ಮೈಕಟ್ಟು. ಸಂಪದ್ಯುಕ್ತ ವಿಜಯಸಾಮ್ರಾಜ್ಯದ ಸಚಿವನಿಗೆ ತಕ್ಕುದಾದ, ಓರಣವಾದ, ಬೆಲೆಬಾಳುವ ವಸನ. ಎಂಥ ಸಂದಿಗ್ಧ ಸನ್ನಿವೇಶದಲ್ಲೇ ಆಗಲಿ ಸಾಳುವ ತಿಮ್ಮ, ನಿಷ್ಕಂಪಿತ, ಅವಿಹ್ವಲ. ಪ್ರಸನ್ನವದನನಾಗಿಯೆ ಆಗಮಿಸಿದವನು ಬದ್ಧಭ್ರುಕುಟಿಯಾಗಿದ್ದ ತರುಣ ಮಹಾರಾಜನನ್ನು ವೀಕ್ಷಿಸಿ ನಗತೊಡಗಿದನು.

'ಇಂಥ ದುರ್ಭರ ಸಂದರ್ಭ ಮಂತ್ರಿವರ್ಯನಿಗೆ ಹಾಸ್ಯಪ್ರಚೋದಕವೆ !'

'ಜೀವನವೇ ಜಟಿಲ. ಜಟಿಲತೆಯ ದುರ್ಭರತೆಯಿಂದ ನೊಂದು ತಪಿಸುವುದರ ಬದಲು ಜಟಿಲತೆಯಿಂದ ವಿಮುಕ್ತವಾಗುವ ಯೋಚನೆ, ಯೋಜನೆ ಲೇಸು. ಚಿಂತೆಯ ಭಾರದಿಂದ ಕುಗ್ಗಬಾರದು ; ಆಲೋಚನೆಯ ನೆರವಿನಿಂದ ಹಿಗ್ಗಬೇಕು. ಸಂದರ್ಭ ಜಟಿಲತರವಾದಷ್ಟೂ ನನಗೆ ಹಿಗ್ಗೂ ನಗೆಯೂ ಹೆಚ್ಚು, ಸಂಕಷ್ಟ ಸನ್ನಿವೇಶವನ್ನು ಇಷ್ಟು ಸುಲಭವಾಗಿ ಜಯಿಸಬಲ್ಲೆನೆಂದು'

ಅರಸು ಅಚ್ಚರಿಪಟ್ಟನು. ಅಪ್ಪಾಜಿ ಸಮಸ್ಯೆಯೆಂಬಂತೆ ದಿಟ್ಟಿಸಿ, ಸಮಸ್ಯೆ ಪರಿಹಾರವಾಗದಿರಲು ಅವನ ಮುಖ ಗಂಭೀರತರ. 'ಅಪ್ಪಾಜಿ. ಆಲೋಚನೆಯೇನು ?'

ಅಪ್ಪಾಜಿ ಸುತ್ತಲೂ ನಿರುಕಿಸಿ, ಸನಿಹದಲ್ಲಿ ಯಾರೂ ಇಲ್ಲದುದನ್ನು ಅರಿತು, ರಾಯನ ಕಿವಿಯಲ್ಲಿ ಪಿಸುಪಿಸುಗುಟ್ಟಿದನು. ರಾಯನ ಚಿಂತೆ ಹಾರಿತು ; ಮೊಗ ಪ್ರಸನ್ನವಾಯಿತು.

**ಅಂದು ಕರ್ಣಾಟಕ ಸೇನಾಶಿಬಿರದಲ್ಲಿ ಹಿಗ್ಗೋ ಹಿಗ್ಗು ; ಉಲ್ಲಾಸವೋ ಉಲ್ಲಾಸ ; ವಿನೋದವೋ ವಿನೋದ.**

ಮಹದುಗ್ರ ಸಂಗ್ರಾಮ ಅಭಿಮುಖವಾಗಿದ್ದು ವಿಶೇಷ ಸೇನಾನಾಶ ಅನಿವಾರ್ಯವೆಂದು ಭಾವಿಸಿದ್ದು ಒಂದೇ ಒಂದೂ ಪ್ರಾಣ ನಾಶವಿಲ್ಲದೆ ಪೊಟ್ಟನೂರು ಸ್ವಾಧೀನವಾಗುವುದೆಂಬ ಸುದ್ದಿ ಪಾಳೆಯದಲ್ಲಿ ಮಿಂಚಿನಂತೆ ಹಬ್ಬಿ ದಂಡಾಳುಗಳ ಕಿವಿಗೆ ಅಮೃತವೂಡಿತು.

ಅಂದು ಮುಚ್ಚಂಜೆ ವಿಜಯಶಿಬಿರದಿಂದ ಹದಿನೆರಡು ದೂತರು ಹೊರಟು ಪೊಟ್ಟನೂರೆಡೆಗೆ ಸಾಗಿದರು. ಹತ್ತು ಜನರ ತಲೆಯಮೇಲೆ ರಾಜಮುದ್ರೆಯುಳ್ಳ ಒಂದೊಂದು ಪೆಡಿಗೆ; ಪೆಡಿಗೆಗೆ ಜರತಾರಿ ಚೀಲದ ಆಚ್ಛಾದನೆ. ಒಂದೊಂದು ಪೆಡಿಗೆಯೂ ಕಿರಿದಾಗಿದ್ದು, ಬಹುಭಾರವಾಗಿದ್ದು, ಹೊತ್ತವರ ಕುತ್ತಿಗೆ ಕುಸಿಯುವಂತಿತ್ತು. ಐದು ಪೆಡಿಗೆಗಳು ಚಿನ್ನದ ಘಟ್ಟಿಗಳಿಂದ ತುಂಬಿದ್ದವು; ಇನ್ನೈದು ಪೆಡಿಗೆ ಅಪೂರ್ವ, ಅಮೂಲ್ಯ ಮಣಿರತ್ನವಜ್ರಾಭರಣಗಳಿಂದ ತುಂಬಿದ್ದವು. ದೂತನಾಯಕ ಸುವರ್ಣಸಂಪುಟದಲ್ಲಿ ಇಡಲ್ಪಟ್ಟ ಗುಪ್ತಪತ್ರದ ವಾಹಕ; ದೂತನಾಯಕನೂ, ಅವನ ಆಪ್ತಾನುಚರನೂ ಸಶಸ್ತ್ರರಾಗಿ ನಿಧಿಗೆ ಕಾವಲು. ಸುವರ್ಣಸಂಪುಟದಲ್ಲಿದ್ದ ಪತ್ರ ಪ್ರತಾಪರುದ್ರನ ಸಾಮಂತ ಶಿರಶ್ಚಂದ್ರಮಹಾಪಾತ್ರನಿಗೆ. ಇವನು ಕೊಂಡಪಲ್ಲಿಯ ಆಕ್ರಮಣದಲ್ಲಿ ರಾಯನ ಕೈಸೆರೆಯಾಗಿದ್ದು, ಕ್ಷಮೆಹೊಂದಿ ಬಿಡುಗಡೆಯಾದವನು. ಇದಕ್ಕೆ ಪ್ರತ್ಯುಪಕಾರವಾಗಿ ರಾಯನಿಗೂ ಗಜಪತಿಗೂ ಯುದ್ಧವುಂಟಾದಾಗ ಸಮರಾಂಗಣದಲ್ಲಿ ಶಿರಶ್ಚಂದ್ರಮಹಾಪಾತ್ರ ಗಜಪತಿಯ ಕೈಬಿಟ್ಟು, ರಾಯನ ಕಡೆ ಸೇರಿಕೊಳ್ಳಬೇಕೆಂದು ಮೊದಲೇ ಅಂಗೀಕರಿಸಿದುದಕ್ಕೆ ಪ್ರತಿಫಲವಾಗಿ ಈ ಸ್ವರ್ಣರತ್ನ ವಜ್ರಾಭರಣಗಳ ಸಂಪುಟಗಳನ್ನು ಕಳಿಸಿರುವುದಾಗಿಯೂ, ಶಿರಶ್ಚಂದ್ರ ತನ್ನ ವಾಗ್ದಾನವನ್ನು ಸಮರಾಂಗಣದಲ್ಲಿ ಪೂರಯಿಸುವುದಾಗಿ ನಂಬಿರುವುದಾಗಿಯೂ ರಾಯನ ಓಲೆ ಒಕ್ಕಣಿಸಿತ್ತು. ಇಂಥ ಗುಪ್ತ, ಮುಖ್ಯಓಲೆಯನ್ನು ಬಹು ಜಾಗರೂಕತೆಯಿಂದ ಕೊಂಡೊಯ್ಯದೆ ಆದೀತೆ! ದೂತರು ಮೈಯೆಲ್ಲ ಕಣ್ಣಾಗಿ ಸಾಗುತ್ತಿದ್ದರು. ಆದರೆ ಉತ್ಕಲದ ಬೇಹುಗಾರರಿಗೆ ಈತಂಡ ಹೊರಟ ಸುದ್ದಿ ಬಹುಬೇಗ ಅರಿವಾಯಿತು. ಉತ್ಕಲದ ಭಂಟರು ಈ ದೂತ ದ್ವಾದಶವನ್ನು ಸೆರೆಹಿಡಿದರು.

ಈ ವೇಳೆಗಾಗಲೆ ರಾಯನ ಬಿಡಾರದಿಂದ ಇನ್ನೊಂದು ದೂತಸಂಚಯ ಹೊರಟಿತ್ತು. ಮೊದಲಿನವರಂತೆಯೇ ಹತ್ತು ಜನದ ತಲೆಯಮೇಲೆ ಸ್ವರ್ಣ, ರತ್ನವಜ್ರಾಭರಣಗಳ ಪೆಡಿಗೆಗಳು. ಪತ್ರವಾಹಕನಾಗಿ ದೂತನಾಯಕ; ಕಾವಲಿಗಾಗಿ ಜೊತೆಗೆ ಇನ್ನೊಬ್ಬ. ಈ ಬಾರಿ ಓಲೆ ಬೋದಜಣ್ಣಮಹಾಪಾತ್ರನಿಗೆ; ಒಕ್ಕಣೆ ಮೊದಲಿನಂತೆಯೇ ಗುರಿಮುಟ್ಟುವುದರೊಳಗಾಗಿ ಈ ದೂತಸಂಚಯವನ್ನೂ ಗಜಪತಿಯ ಭಟರು ಹಿಡಿದುಹಾಕಿದರು.

ಪ್ರತಾಪರುದ್ರನ ಆಧಾರಸ್ತಂಭರಾದ ಹದಿನಾರು ಮಹಾಪಾತ್ರರಿಗೆಂದು ಉದ್ದೇಶಿಸಿ ಹೊನ್ನು ರತ್ನಗಳ ಪೆಡಿಗೆಗಳೂ, ವಾಗ್ದಾನದಂತೆ ಸಮರರಂಗದಲ್ಲಿ ಪ್ರತಾಪರುದ್ರನ ಕೈಬಿಟ್ಟು ತನ್ನ ಕಡೆ ಸೇರಿಕೊಳ್ಳಬೇಕೆಂದು ಓಲೆಗಳೂ ಕಳುಹಲ್ಪಟ್ಟವು. ಇವುಗಳಲ್ಲಿ ಹಲವು ಪ್ರತಾಪರುದ್ರನ ಕೈಸೇರಿದವು. ತನ್ನ ನಚ್ಚಿನ ಮಹಾಪಾತ್ರರ ವಿಶ್ವಾಸಘಾತಕತೆಯಿಂದ ಪ್ರತಾಪರುದ್ರ ಹೌಹಾರಿದನು; ಕಾಲ್ಮುರಿದ ಪಂದ್ಯದ ಕುದುರೆಯಂತೆ ಅವನ ಸ್ಥಿತಿ. ತನ್ನ ಮೂಲಬಲವನ್ನು ಮಾತ್ರ ನೆಚ್ಚಿ ಕರ್ಣಾಟಕ ಸೇನಾಸಾಗರದ ಮೇಲೆ ದಾಳಿಮಾಡಿದರೆ ಕ್ಷಣಾರ್ಧದಲ್ಲಿ ತಾನು ಸೇನಾಸಮೇತ ಸಾಗರತಳದಲ್ಲಿ ಮುಳುಗುವುದು ಖಂಡಿತ. ತಾ ಯುದ್ಧಾಭಿಮುಖನಾಗದಿದ್ದರೂ, ವಿಶ್ವಾಸಘಾತಕ ಮಹಾಪಾತ್ರರು ತನನ್ನು ಕೈಸೆರೆಹಿಡಿದು ಶತ್ರುವಿಗೊಪ್ಪಿಸುವುದು ಅಸಂಭವವಲ್ಲ. ಕತ್ತರಿಯ ನಡುವೆ ಸಿಕ್ಕಿದಂತಾಯ್ತು ; ಪ್ರತಾಪರುದ್ರ ತತ್ತರಿಸಿದನು. ಮುಂದಾರಿಗಾಣದೆ ಗಡಿಬಿಡಿಯ ಹುಯ್ಲಿನಲ್ಲಿ ಅವನ ಮಿದುಳು ಸುಡತೊಡಗಿತು. ನಿಶೆಯ ಮಂದಸಮೀರ ತೀಡುತ್ತಿದ್ದರೂ ಇನ್ನೆಲ್ಲಿಯ ನಿದ್ದೆ.

ಮರುಮುಂಜಾವು ಪೊಟ್ಟನೂರ ಅರಮನೆಯಲ್ಲಿ ಗುಲ್ಲೋಗುಲ್ಲು. ರಾಜನಿಲ್ಲ! ರಾಜನಿಲ್ಲ! ದಾಸಿ ಹೇಳಿದಳು 'ರಾಜನಿಲ್ಲ' ಎಂದು ; ಪ್ರತಿಹಾರಿ ಹೇಳಿದನು 'ರಾಜನಿಲ್ಲ' ಎಂದು; ಕಂಚುಕಿ ಹೇಳಿದನು 'ರಾಜನಿಲ್ಲ' ಎಂದು. ತಟಕ್ಕನೆ ಕಂಚುಕಿಗೆ ಬೇರೆ ಮಾತು ಹೊಳೆಯಿತು 'ಅರಸ ಬೇಸರಗೊಂಡಾಗ ಮಲ್ಲಿಕಾಮಂಟಪದಲ್ಲಿ ತಂಗಾಳಿಗೆ ಮೈಯೊಡ್ಡಿ

ವಿಶ್ರಮಿಸುವುದು ರೂಢಿ; ಅಲ್ಲಿ ನೋಡಿ ಬಂದಿದೀರ?' ಭೃತ್ಯರ ಮುಖಗಳೆಲ್ಲ ಅರಳಿದವು. ಇಂಥ ಸ್ಪಷ್ಟ ವಿಷಯ ಮೊದಲೇ ಹೊಳೆದಿದ್ದರೆ ಇಷ್ಟೆಲ್ಲ ಗೊಂದಲವಾಗುತ್ತಲೇ ಇರಲಿಲ್ಲ, ಎಂದುಕೊಂಡರು. ತಮ್ಮರಸ ಇರುವನೆನುವುದು ಮತ್ತೆ ಎಲ್ಲರಿಗೂ ವ್ಯರ್ಥವಾಯ್ತು. ಕೆಲವು ಕ್ಷಣ ಉರುಳಿದರೂ ಮಲ್ಲಿಕಾಮಂಟಪದೆಡೆಗೆ ಯಾವ ಭೃತ್ಯನೂ ಹೊರಡದಿರಲು, ಕಂಚುಕಿ ಇಬ್ಬರನ್ನು ಆಯೆಡೆಗೆ ಓಡಿಸಿದನು. ಅರಮನೆಯವರಿಗೆ ಅರಸನ ಇರುವಿಕೆಯ ಬಗೆಗೆ ಮತ್ತೆ ಸಂದೇಹ ಮೂಡಿತು. ಮಲ್ಲಿಕಾಮಂಟಪಕ್ಕೆ ಸಾಗಿದ್ದ ಭೃತ್ಯರು ನಿರಾಸೆಯಿಂದ ಹಿಂಬಂದಾಗ ಅರಮನೆಯ ಊಳಿಗದವರೆಲ್ಲ ಕುಸಿತು ಬಿದ್ದಂತಾದರು. ದುರ್ಗದಲ್ಲೇ ಬೀಡುಬಿಟ್ಟಿದ್ದ ಹದಿನಾರು ಮಹಾಪಾತ್ರರ ಕಿವಿಯನ್ನು ಅರಸ ಅಂತರ್ಧಾನನಾದ ಸುದ್ದಿ ಚುಚ್ಚಿತು. ಅಗಾಧವಾದ ಕನ್ನಡಸೇನೆಗೆ ಕಾಳಗ ಕೊಡಲು ದಿಗಿಲುಗೊಂಡು ಅರಸು ಗಜಪತಿ ಪೊಟ್ನೂರನ್ನು ಬಿಟ್ಟು ಉತ್ತರ ದೆಸೆಗೆ ಅರ್ಧರಾತ್ರಿಯಲ್ಲಿ ಪಲಾಯನ ಮಾಡಿರುವ ಸುದ್ದಿ ಕಾಡ್ಗಿಚ್ಚಿನಂತೆ ನಗರದಲ್ಲಿ ಹರಡಿತು. ತಮ್ಮರಸನ ಭೀರುತ್ವದಿಂದ ನಾಗರಿಕರೆಲ್ಲ ಲಜ್ಜಿತರು; ಮಹಾಪಾತ್ರರಿಗೆ ನಿರಾಸೆ. ಅರಸನಿಗೆ ಒಲ್ಲದ ಸಮರದ ತೀಂಟೆ ತಮಗೇಕೆಂದು ಮಹಾಪಾತ್ರರು ಒಬ್ಬೊಬ್ಬರಾಗಿ ಪೊಟ್ನೂರನ್ನು ತ್ಯಜಿಸಿ ಸ್ವಸ್ಥಾನಾಭಿಮುಖರಾಗಿ ಹೊರಟರು. ಕೆಲವು ದಿನಗಳಲ್ಲಿ ಪೊಟ್ನೂರು ದುರ್ಗ ನಿಸ್ಸೈನಿಕ. ನಾಗರಿಕರು ದುರ್ಗದ್ವಾರವನ್ನು ತೆರೆದು, ಶಾಂತಿ ಸೂಚಕ ಶ್ವೇತಪತಾಕೆಗಳನ್ನೆತ್ತಿ ಹಿಡಿದು ಕನ್ನಡಸೈನ್ಯದ ಪಾಳೆಯದ ದೆಸೆಗೆ ನಡೆದು ಬಂದರು.

ಕೃಷ್ಣದೇವರಾಯ ಚಿಂತಾಮಗ್ನನಾಗಿ ಆಸೀನನಾಗಿದ್ದ. ದಿಟ್ಟಿ ದೂರದ, ಕಾಣದ, ಕರುನಾಡಲ್ಲಿ ನೆಟ್ಟಿರುವಂತೆ ಆಗ್ನೇಯದೆಸೆಗೆ. ಒಮ್ಮೆ ಭವಿಷ್ಯದಲ್ಲಿ ಅಮಂಗಳವನ್ನು ನಿರೀಕ್ಷಿಸಿ ವಿಹ್ವಲನಾಗುವನು; ಇನ್ನೊಮ್ಮೆ ಕಾರ್ಯಸಿದ್ಧಿಯನ್ನು, ಗೆಲುವನ್ನು ವೀಕ್ಷಿಸಿ ಪ್ರಸನ್ನಮುಖಿಯಾಗುವನು. ವಿಜಯನಗರದ, ಕರ್ಣಾಟಕಸಾಮ್ರಾಜ್ಯದ ವೈಭವ ಅಧಿಕಿಸುವ ನಿರೀಕ್ಷೆ ಅವನ ಮೊಗದಲ್ಲಿ ಆನಂದದ ತೆರೆಗಳನ್ನು ಉಕ್ಕಿಸುವುದು; ಪರಾಭವದ ಕಲ್ಪನೆ ಮೊಗವನ್ನು ಕಪ್ಪಿಡಿಸುವುದು.

ಈ ಚಣವಂತೂ ರಾಯನ ಕಲ್ಪನಾಪ್ರಪಂಚದಲ್ಲಿ ಪ್ರತಾಪರುದ್ರ ಕರ್ಣಾಟಕಸೇನೆಯನ್ನು ನುಚ್ಚುನೂರಾಗಿಸಿ, ವಿಜಯ ನಗರದವರೆಗೂ ನುಗ್ಗಿ, ಆ ಸಂಪತ್‌ಸಮೃದ್ಧ ಮಹಾನಗರವನ್ನು ಹಾಳ್ಗೆಡವಿದ್ದನು; ರಾಯನಿಗೆ ಹನಿಗಣ್ಣಾಗಿತ್ತು.

'ಹಹ್ಹ ಹ್ಹಾ !' 'ಹಹ್ಹ ಹ್ಹಾ ಹ್ಹಾ !'

ಕಲ್ಪನಾ ಪ್ರಪಂಚದಲ್ಲಿನ ವಿನಾಶದಿಂದ ತಲ್ಲಣಗೊಂಡಿದ್ದ ರಾಯನಿಗೆ ವಿಜಗೀಷು ಪ್ರತಾಪರುದ್ರನ ಅಟ್ಟಹಾಸದ ನಗೆಯಿಂದ ಮೈ ಮುಳ್ಳು ಬಂದಂತಾಯ್ತು. ತನುರೋಮರಾಜಿ ಉಗ್ರಕ್ರೋಧದಿಂದ ಉರಿಗೊಂಡವು.

'ಹಹ್ಹ ಹ್ಹಾ !' 'ಹಹ್ಹ ಹ್ಹಾ ಹ್ಹಾ !'

ಮೊದಲಿಗಿಂತಲೂ ಉಚ್ಚತರವಾಗಿ ಅಟ್ಟಹಾಸ ಕೇಳಿದಂತಾಯ್ತು. ರಾಯ ಬೆಚ್ಚಿ ಹಿಂದೆ ನೋಡಿದ. ಓಹ್ ! ಅಟ್ಟಹಾಸ ಕಲ್ಪನಾಪ್ರಪಂಚದಲ್ಲಿ ಪ್ರತಾಪರುದ್ರನಿಂದಲ್ಲಿ; ನೈಜಲೋಕದಲ್ಲಿ ನಚ್ಚಿನ ಮಂತ್ರಿ ಸಾಳುವ ತಿಮ್ಮನಿಂದ. ಅರಸನ ಸನಿಹ ಸಾರುತ್ತು, ಸಾಳುವ ತಿಮ್ಮ ಎರಡು ಬಾರಿ ಅಟ್ಟಹಾಸದಿಂದ ನಕ್ಕಿದ್ದನು.

'ಅಪ್ಪಾಜಿ ! ಅಂಥ ನಗೆಯೇಕೆ ? ಹೊಸತೊಂದು ಗಡುತರ ಸಮಸ್ಯೆ ಆವಿರ್ಭೂತವಾಗಿರುವುದೇನು, ಅಷ್ಟೊಂದು ನಗೆ ಬರಿಸಲು ?'

ಸಾಳುವ ತಿಮ್ಮ ನಗೆತಡೆಯಲಾರದೆ ಮತ್ತೆ ಮತ್ತೆ ನಕ್ಕು, ಹೇಳಬೇಕೆಂದಿದ್ದ ಮಾತನ್ನು ನಿವಾರಿಸಲಾರದೆ ನಗೆಯನಡುವೇ ಎಂದನು 'ಹಳೆಯ ಸಮಸ್ಯೆ ಪರಿಹಾರವಾಯಿತು.'

'ಅರಸನಿಗೆ ನೂರಾರು ಸಮಸ್ಯೆ ಇರುತ್ತವೆ. ಪರಿಹಾರವಾದುದಾವುದು ?'

'ಅದೇ ! ಪ್ರಮುಖತಮ ಸಮಸ್ಯೆ. ಮಹಾಪಾತ್ರರಿಗೆ ಲಂಚಕಳಿಸಿದ ನಾಟಕ ಸಂಪೂರ್ಣ ಯಶಸ್ವಿ ಯಾಯಿತು.'

ಮ್ಲಾನವದನನಾಗಿದ್ದ ರಾಯ ಹಿರಿಹಿರಿ ಹಿಗ್ಗಿದನು. ಧಿಗಿಲ್ಲನೆ ನೆಗೆದೆದ್ದು, ಅಪ್ಪಾಜಿಯನ್ನು ಅಪ್ಪಿಕೊಂಡು 'ಏನಾಯಿತು ?' ಎಂದನು.

'ನಾವು ಮಹಾಪಾತ್ರರಿಗೆಂದು ಕಳುಹಿದ್ದ ಸುಳ್ಳು ಓಲೆಗಳಲ್ಲಿ ಕೆಲವು ಗಜಪತಿಗೆ ಸಿಕ್ಕು, ಆ ಓಲೆಗಳ ಒಕ್ಕಣೆಯನ್ನು ನಿಜವೆಂದೇ ನಂಬಿ ಗಜಪತಿ ಅರ್ಧರಾತ್ರಿಯಲ್ಲಿ ಪೊಟ್ಟನೂರನ್ನು ಬಿಟ್ಟು ಉತ್ತರದೆಸೆಗೆ ಓಡಿಹೋಗಿದಾನೆ. ಅಂಜುಕುಳಿ ಅರಸ ಯುದ್ಧನಿಲ್ಲಲಾರದೆ ಪಲಾಯನಮಾಡಿರುವನೆಂದು ಭಾವಿಸಿ, ಮಹಾಪಾತ್ರರೂ ಒಬ್ಬೊಬ್ಬರಾಗಿ ಸ್ವಸ್ಥಾನಕ್ಕೆ ನಿರ್ಗಮಿಸಿದರು. ನಗರ ಅರಕ್ಷಕವಾಗಲು, ಅದನ್ನು ಕನ್ನಡಸೇನೆ ಬಂದು ರಕ್ಷಿಸಬೇಕೆಂದು ಪೊಟ್ಟನೂರ ನಾಗರಿಕರು ಬಂದು ಬೇಡುತ್ತಿದಾರೆ.'

'ಭಾಪು, ಮಹಾಮಂತ್ರಿ. ಮಹಾ ಜನನಾಶದಿಂದ ಮಾತ್ರ ಸ್ವಾಧೀನವಾಗಬಹುದಾಗಿದ್ದ ದುರ್ಗ ನಿನ್ನ ಚಾಣಕ್ಯತನದಿಂದ ನೆತ್ತರ ಹನಿಯೊಂದೂ ನೆಲಕ್ಕೆ ಜಗುಳದೆ ನಮ್ಮ ಕೈವಶವಾಯ್ತು. ನನ್ನ ಕಣ್ಣುಗಳನ್ನು ಕಾಪಿಟ್ಟು, ನನ್ನನ್ನು ವಿಜಯಸಾಮ್ರಾಜ್ಯದ ಸಿಂಹಾಸನಾರೂಢನನ್ನಾಗಿಸಿದ್ದುದಕ್ಕೆ ನಾ ಸಲಿಸುತ್ತಿದ್ದ ಕೃತಜ್ಞತೆಯ ಜೊತೆಗೆ, ಇಂದಿನ ವಿಷಮ ಸನ್ನಿವೇಶದಿಂದ ಇಷ್ಟೊಂದು ಸುಲಭವಾಗಿ ಪಾರುಮಾಡಿದುದಕ್ಕಾಗಿಯೂ ಋಣಿಯಾಗಿರುವೆ.'

ನಿದ್ರಾವಸ್ಥೆಯಲ್ಲಿದ್ದಂತಿದ್ದ ಕನ್ನಡಸೇನೆ ಕಹಳೆಯ ಮೊಳಗು ಕೇಳಿ ಚಕ್ಕನೆ ಚಲನೆಹೊಂದಿ, ಮುನ್ನಡೆಗೆ ಸಿದ್ಧವಾಯ್ತು. ಮಣಿಕನಕರತ್ನ ವಿಭೂಷಿತನಾಗಿ ಕೃಷ್ಣದೇವರಾಯ ಮತ್ತಹಸ್ತಿಯ ಬೆನ್ನಿಗಿದ್ದ ಅಂಬಾರಿಯೇರಿದನು. ಅಂಬರ ಬಿರಿವ ತೂರ್ಯನಾದ ಪೊಟ್ಟನೂರಿಗರ ಕರ್ಣಗಹ್ವರವನ್ನು ಗಡಚಿಕ್ಕಿತು. ಮಹಾರಾಜಾಧಿರಾಜ ರಾಜಪರಮೇಶ್ವರ ವೀರ ಭುಜಬಲಪ್ರತಾಪ ಕೃಷ್ಣರಾಯ ಮಹಾರಾಯ ಸೇನಾಸಮೇತನಾಗಿ ಪೊಟ್ಟನೂರನ್ನು ಪ್ರವೇಶಿಸಿ, 'ಗಜಪತಿ ಸಪ್ತಾಂಗ

ಹರಣ' ಎಂಬ ಬಿರದುತಳೆದನು. ಗೆಲುವಿನ ಗುರುತಾಗಿ ತೆಂಗಿನ ಮರದೆತ್ತರದ ವಿಜಯಸ್ತಂಭವನ್ನು ನಿಲಿಸಲಾಯ್ತು; ರಾಯನ ಬಿರುದುಗಳೆಲ್ಲವೂ ವಿಜಯಸ್ತಂಭದಮೇಲೆ ಕೆತ್ತಲ್ಪಟ್ಟದ್ದವು.

ವಿಜಯಸೈನ್ಯ ಕರ್ಣಾಟಕದಿಂದ ಶತ್ರುರಾಜ್ಯದಲ್ಲಿ ಮುಂದೆ ಮುಂದೆ ಸಾಗುತ್ತಿದ್ದಂತೆ ಉತ್ಕಲಾಧಿಪತಿ ಪ್ರತಾಪರುದ್ರ ಪ್ರತಾಪಹೀನನಾಗಿ ಹಿಂದೆ ಹಿಂದೆ ಸರಿಯುತ್ತ, ದೂರ ದೂರ ಪಲಾಯನ ಮಾಡುತ್ತಿದ್ದನೇ ವಿನಹ ರಾಯನಿಗೆ ಕೈಸೆರೆಯಾಗಲಿಲ್ಲ. ಉತ್ಕಲದ ಹಿಂದಣ ವಿಶಾಲ ಭೂಮಿ ಪ್ರತಾಪರುದ್ರನ ಹಸ್ತಗತವಾಗಿಯೆ ಇದ್ದಿತು. ಪೊಟ್ಟನೂರನ್ನು ಬಿಟ್ಟು ಓಟಕಿತ್ತ ಗಜಪತಿ ಮತ್ತಾವ ಗೋಂಡಾರಣ್ಯದಲ್ಲಿ ಅಡಗಿಕೊಂಡಿದಾನೋ ಎಂದು ಭಾವಿಸಿ, ರಾಯ ಉತ್ಕಲದ ಗುಡ್ಡಗಾಡು ಸೀಮೆಗೆ ದಾಳಿಮಾಡಿ ವಿನಾಶಗೊಳಿಸಿದನು; ಗಜಪತಿ ಸಿಗಲಿಲ್ಲ. ರಾಯ ಸೇನೆಯನ್ನು ಮುನ್ನಡೆಸುತ್ತಾ ಅಭಿಮುಖವಾದ ಪಟ್ಟಣಗಳಿಗೆಲ್ಲ ಬೆಂಕಿಯಿಡುತ್ತ ದಾವಾನಲದಂತೆ ಸಾಗಿದನು. ಉತ್ಕಲದ ಬಹು ಭಾಗ ಅಗ್ನಿದಗ್ಧವಾಗಿ ಹಾಳ್‌ಬಿದ್ದಿತು. ಇನ್ನೂ ಉಳಿದುದೆಂದರೆ ಉತ್ಕಲ ಸಾಮ್ರಾಜ್ಯದ ರಾಜಧಾನಿ ಕಟಕಪುರಿ; ಸಂಪದ್ಯುಕ್ತ ಜನಭರಿತ ಪ್ರಾಚೀನ ಮಹಾನಗರ. ಗಜಪತಿ ಅಡಗಿರುವುದಾದರೆ ಇಲ್ಲಿ; ಕಟಕಪುರಿಯಲ್ಲಿ ಇಲ್ಲದಾದಲ್ಲಿ ಈಗಾಗಲೆ ಯಮಪುರಿಯನ್ನು ಸೇರಿರಬೇಕು, ಎಂದುಕೊಂಡನು ಕೃಷ್ಣದೇವರಾಯ. ಕರ್ಣಾಟಕ ಸೇನೆ ಭೋರಿಡುತ್ತ ಕಟಕಪುರಿಯ ದೆಸೆಗೆ ನುಗ್ಗಿತು.

ಉತ್ಕಲಾಧಿಪತಿ ಪೊಟ್ಟನೂರನ್ನು ಸರಿರಾತ್ರಿಯಲ್ಲಿ ಬಿಟ್ಟವನು ತೀರ ಆಪ್ತರಾದ ಕೆಲವು ಬಂಟರೊಡನೆ ವೇಗವಾಗಿ ಚಲಿಸುತ್ತ, ರಾಜಧಾನಿ ಕಟಕಪುರಿಗೆ ಬಂದು ಅಡಗಿಕೊಂಡಿದ್ದನು. ಮಹಾಪಾತ್ರರು ರಾಜದ್ರೋಹಿಗಳಲ್ಲವೆಂಬುದೂ, ಮಂತ್ರಿ ಸಾಳುವ ತಿಮ್ಮನ ತಂತ್ರಕ್ಕೆ ತಾನು ಬಲಿಬಿದ್ದುದೂ ಆನಂತರ ಗಜಪತಿಗೆ ತಿಳಿಯಿತು. ಪೊಟ್ಟನೂರು ಈ ಬಗೆ ಶತ್ರುವಶವಾದುದಕ್ಕೆ ತಾನೇನೂ ಚಿಂತಿಸುವ ಅವಶ್ಯಕತೆಯಿರಲಿಲ್ಲ; ಕಾಳೆಗವಿಲ್ಲದೆ ಈಗ ಕೈಬಿಟ್ಟು ಹೋದುದು, ತಾನು ಅಲ್ಲೇ ನಿಂತುದಾಗಿದ್ದರೆ ಉಗ್ರಸಂಗ್ರಾಮ, ಅಪಾರ ಸೈನ್ಯವಿನಾಶದ ನಂತರ ಕೈಬಿಡುವುದಿತ್ತು. ರಾಯ ಮತ್ತೆ ಉತ್ಕಲ

ಸೀಮೆಯ ಉತ್ತರ ಭಾಗದಲ್ಲಿ ನುಗ್ಗಿ ಕೋಲಾಹಲ ಮಾಡುತ್ತಿದ್ದ ಸುದ್ದಿಯಿಂದ ಗಜಪತಿ ದಿಗ್ಭ್ರಾಂತ. ಕನ್ನಡ ಸೇನೆ ಯಾವ ಗಳಿಗೆಗೆ ಕಟಕಪುರಿಗೆ ನುಗ್ಗಿ ಉಧ್ವಸ್ತಗೊಳಿಸುವುದೋ, ಎಂದು ಗಜಪತಿ ತತ್ತರಿಸುತ್ತ ಹೊತ್ತುಗಳೆಯುತ್ತಿದ್ದನು. ನಿರೀಕ್ಷೆಯ ಭಯದಲ್ಲಿ ಗಜಪತಿಗೆ ಗಳಿಗೆ ಗಳಿಗೆಗೂ ಪ್ರಾಣಹೋಗುತ್ತಿತ್ತು.

ಶತ್ರು ಸೈನ್ಯಾಗಮನದ ನಿರೀಕ್ಷೆಯ ಭಯದಿಂದ ತತ್ತರಿಸುತ್ತಿದ್ದರೂ, ಅನವರತ ಸಮರದಿಂದ ಬಳಲಿ ಬೇಸರಗೊಂಡ ಶತ್ರುಸೇನೆ ಕಟಕಪುರಿಯವರೆಗೂ ಬಾರದೆ ಹಿಂದಿರುಗಿ ಹೋದರೂ ಹೋಗಬಹುದೆಂಬ ವ್ಯರ್ಥ ಆಸೆ ಅವನೆದೆಯಲ್ಲಿ ಮಿಡಿಯುತ್ತಿತ್ತು. ವಿಜಯಸೇನೆ ಕಟಕಪುರಿಯ ಸನಿಹದಲ್ಲಿ ಬರುತ್ತಿರುವ ಸಿಡಿಲ ಸುದ್ದಿ ಇದ್ದಕ್ಕಿದ್ದಂತೆ ಬಡಿದು ಗಜಪತಿ ಮೂರ್ಛಿತನಾದನು. ಮೈತಿಳಿವು ಬಂದರೂ ಮುಂದಾರಿಯ ತಿಳಿವು ಬಾರದೆ ಗಜಪತಿ ವಿಹ್ವಲ. ಪತ್ನಿ, ಪುತ್ರರು ಶತ್ರುವಿನ ಕರಗತರು; ತಾನು ಹೆಂಬೇಡಿಯೆಂದು ಮಹಾಪಾತ್ರರು ನೆರವು ಬಾರದೆ ದೂರ ನಿಂತಿದಾರೆ. ಕಟಕಪುರಿಯಲ್ಲಿದ್ದ ಅಲ್ಪ ಸೇನೆಯ ನೆರವು ವಿಜಯಸೇನೆಯನ್ನು ವಿರೋಧಿಸಲು ಸರ್ವಥಾ ಅಸಮರ್ಥ. ದೇವರ ಮೇಲೆ ಭಾರ ಹಾಕಿ, ಅರಮನೆಯಲ್ಲಿ ಸ್ವರ್ಣಮಂಚದಮೇಲೆ ತನ್ನ ಭಾರಹಾಕಲು ಬಯಸಿದನು. ನವುರು ರೇಸಿಮೆಯ ತಲೆದಿಂಬು ಮುಳ್ಳಿನಂತೆ ಕೆನ್ನೆ ಚುಚ್ಚಲು, ಬೆಚ್ಚಿ ಶತಪಥ ತಿರುಗತೊಡಗಿದನು.

ಸಂಜೆಯವೇಳೆಗೆ ನಗರದ ಹೊರವಲಯದಲ್ಲಿ ಬೆಂಕಿ ಬಾನೆತ್ತರ ಎದ್ದುದನ್ನು ಕಂಡು ಗಜಪತಿ ಬೆಚ್ಚಿದ. ದೂತನೊಬ್ಬ ಧಾವಿಸಿ, ಶತ್ರುಗಳು ದುರ್ಗಭಿತ್ತಿಯನ್ನು ಕಿತ್ತು, ನಗರದ ಹೊರವಲಯಗಳಿಗೆ ಬೆಂಕಿಯಿಟ್ಟಿದಾರೆಂದು ತಿಳಿಸಲು ಗಜಪತಿ ಹೌಹಾರಿದನು. ಭೂಮಿತಾಯಿಯೇ ತನಗೆ ಪ್ರತಿಕೂಲೆಯಾಗಿ, ತಾ ಹೋದಕಡೆಯಲ್ಲೆಲ್ಲ ಕನ್ನಡ ಸೇನೆಯನ್ನು ಪ್ರಸವಿಸುತ್ತಿದಾಳೇನೋ ಎಂದು ಸಂಭ್ರಾಂತನಾದನು. ನೋಡೆ ನೋಡೆ ಕತ್ತಲೆ ಮುಸುಕಿತು. ನಗರದ ಹೊರವಲಯಗಳಿಗೆ ಹೊತ್ತಿದ್ದ ಬೆಂಕಿ ಕೆನ್ನಾಲಗೆಯನ್ನು ಚಾಚಿ ಮುಗಿಲು ನೆಕ್ಕುತ್ತಿತ್ತು. ಅಗ್ನಿ ಶೀಘ್ರಗತಿಯಿಂದ

ಅತ್ತಿತ್ತ ಹರಡತೊಡಗಿತ್ತು. ದಗ್ಧ ಗೃಹಗಳಿಂದ ಪಲಾಯನ ಮಾಡುತ್ತಿದ್ದ ಜನದ ನೀಳ್‌ಗೋಳಿನ ಹುಯ್ಲೊ ಬೆಂಕಿಗೆ ಸಮಸಮನಾಗಿ ಬಾನ್‌ಮುಟ್ಟಿತ್ತು. ನೋಡ ನೋಡುತ್ತ, ಕೇಳ ಕೇಳುತ್ತ ಗಜಪತಿ ಥರ ಥರ ನಡುಗತೊಡಗಿದನು. ಯುದ್ಧನಿಂದರೆ ಪರಾಭವವಾಗುವುದೆಂಬ ಭಯದಿಂದಲೇ ಇದುವರೆಗೆ ಪಲಾಯನಮಾಡುತ್ತಿದ್ದವನಿಗೆ ಇದ್ದಕ್ಕಿದ್ದಂತೆ ಪ್ರಾಣಭಯ ತಲೆದೋರಿ ತತ್ತರಿಸಿದನು. ರಣಕಾಳಿಯೇ ರಾಯನಾಗಿ ಅವತಾರವೆತ್ತಿ, ತನ್ನ ಮೇಲೆ ನುಗ್ಗುನುಗ್ಗುತ್ತ ರಕ್ತ ಪಿಪಾಸೆಯನ್ನು ತೃಪ್ತಿಗೊಳಿಸಿಕೊಳ್ಳಲು ಯತ್ನಿಸುತ್ತಿರುವಂತೆ ಎಣಿಸಿದನು. ಭೀತಿಯಿಂದ ಮೈ ನವಿರೆದ್ದಿತು.

ಕನ್ನಡ ಕಟ್ಟಾಳುಗಳು ಸಮಗ್ರ ಕಟಕಪುರಿಗೇ ಕೊಳ್ಳಿಯಿಡುತ್ತ ಅರಮನೆಯ ದೆಸೆಗೆ ಮುನ್ನುಗ್ಗಿದರು. ಅರಮನೆಯ ಕಾವಲುಗಾರರು ತಡೆಮಾಡಲಿಲ್ಲ, ಅವರನ್ನೆಲ್ಲ ನಿಶ್ಯಸ್ತ್ರರನ್ನಾಗಿ ಮಾಡಿ ಕನ್ನಡ ಕಟ್ಟಾಳುಗಳು ಅರಮನೆಯ ಒಳನುಗ್ಗಿದರು. ಎಲ್ಲಿ ಅರಸಿದರೂ ಅದೇ ಹಳೆಯ ಪಲ್ಲವಿ 'ರಾಜನಿಲ್ಲ' 'ರಾಜನಿಲ್ಲ'; ಸಂದಿಗ್ಧ ಸನ್ನಿವೇಶ ಬಂದೊದಗಿದಾಗಲೆಲ್ಲ ಗಜಪತಿ ಭೂಮಿಯ ಬಸಿರಲ್ಲಿ ಅವಿತುಕೊಂಡು, ಕಾಲಾನಂತರ ಮತ್ತಾವುದೋ ದುರ್ಗರಕ್ಷೆಯಲ್ಲಿ ಗೋಚರನಾಗುತ್ತಿದ್ದನೇನೊ ! ಗಜಪತಿ ಆಪ್ತಾನುಚರರನ್ನೊಡಗೊಂಡು ಅದೆತ್ತವೊ ಸಾಗಿಹೋದನೆಂಬುದು ಸ್ಪಷ್ಟ. ಸಮಗ್ರ ಕಟಕಪುರಿಯನ್ನೇ ನುಂಗಿದ ಮಹಾಗ್ನಿಜ್ವಾಲೆ ಗಜಪತಿಯ ಕತ್ತಲ ದಾರಿಗೆ ಕೆಂಬೆಳಕು ನೀಡಿ ಮಾರ್ಗದರ್ಶಿಯಾಯ್ತು.

ಪೊಟ್ಟನೂರನ್ನು ಸೇನಾಕೇಂದ್ರವಾಗಿಟ್ಟುಕೊಂಡು ಕೃಷ್ಣದೇವರಾಯ ಆರುತಿಂಗಳಿಂದ ಉತ್ಕಲಾಧಿಪನ ಅರಮನೆಯಲ್ಲೇ ಬೀಡುಬಿಟ್ಟಿದ್ದನು. ಉತ್ಕಲದ ವಿವಿಧ ಭಾಗಗಳಿಗೆ ಅಲ್ಲಿಂದಲೇ ಸೇನೆನಡೆಸಿ, ಉಧ್ವಸ್ತಗೊಳಿಸುತ್ತಿದ್ದನು. ಉತ್ಕಲದ ಸಮಗ್ರ ಸೀಮೆಯೆಲ್ಲ ಅಗ್ನಿದಗ್ಧವಾಯ್ತು. ತಲೆತಲಾಂತರಗಳಿಂದ ಉತ್ಕಲಾಧಿಪರು ವಿಜಯಸಾಮ್ರಾಜ್ಯದಲ್ಲಿ ನುಗ್ಗಿ ನಡೆಸಿದ ಉಪಹತಿಗೆ ತಕ್ಕ ಪ್ರತೀಕಾರವಾಯ್ತು. ಪ್ರತಾಪರುದ್ರನ ಪತ್ನಿ ಪುತ್ರರು ಸೆರೆಸಿಕ್ಕಿದರು ; ಆದರೂ ರಾಯ ಅಸಂತೃಪ್ತ. ಪ್ರತಾಪರುದ್ರ ಕರಗತನಾಗುವವರೆಗೆ ರಾಯನ ಕ್ರೋಧ ಶಮನವಾಗದು.

ಪೊಟ್ಟನೂರು ಅರಮನೆಯ ಮುಂದೆ ಇಂದು ವಿಜಯೋತ್ಸವ. ವಿಶಾಲ ಉತ್ಕಲಸಾಮ್ರಾಜ್ಯವನ್ನೇ ಕನ್ನಡಕಲಿಗಳು ಕಲಕಿ, ಕೋಲಾಹಲವೆಬ್ಬಿಸಿ, ವಿಜಯಿಯಾದ ಸಂಭ್ರಮದ ಸಮಾರಂಭ. ಪೊಟ್ಟನೂರ ಅರಮನೆಯ ಮುಂದಿನ ಬಯಲಲ್ಲಿ ಪೌರರು ನೆರೆದಿದಾರೆ; ಕೃಷ್ಣದೇವರಾಯ ಅರಮನೆಯ ಅಂತಸ್ತಿನಲ್ಲಿ ಗದ್ದುಗೆಯೇರಿ ವಿಜೃಂಭಿಸಿದಾನೆ. ಮಲ್ಲರಂಗದಲ್ಲಿ ಮಲ್ಲರ ಮುಷ್ಟಾಮುಷ್ಟಿಯಾಯಿತು. ಜಟ್ಟಿಗಳ ಕಾಳಗವಾಯಿತು. ಅಶ್ವಗಳ ನೃತ್ಯವಾಯಿತು; ಆನೆಗಳ ತಿಪ್ಪರುಲಾಗ ವಾಯಿತು; ಯೋಧರ ಕತ್ತಿವರಸೆಯಾಯಿತು. ಇನ್ನೂ ಹಲವು ಹಲವು ವಿನೋದ, ಚಮತ್ಕಾರ, ಶಕ್ತಿಪ್ರದರ್ಶನ ನಡೆದವು. ನೆರೆದ ಜನ ಸಂದರ್ಭೋಚಿತವಾಗಿ ತಮ್ಮ ತಲ್ಲಣ, ಆಶ್ಚರ್ಯ, ಸಂತೋಷಗಳನ್ನು ಪ್ರದರ್ಶಿಸುತ್ತಿದ್ದರು. ಸಮಾರಂಭಕ್ಕೆ ಮುಕ್ತಾಯವಾಗಿ ಅಪೂರ್ವವಾದೊಂದು ಕಾರ್ಯಕ್ರಮವಿದೆಯೆಂದು ಗುಂಪಿನಲ್ಲಿ ಗುಜುಗುಜು; ಏನೆಂಬುದು ಯಾರಿಗೂ ತಿಳಿಯದೆ, ಸಿರೀಕ್ಷಣೆ ಅವರ ಉತ್ಸುಕತೆಯನ್ನು ವರ್ಧಿಸಿತ್ತು.

ಇಗೋ, ಕಟ್ಟಕಡೆಯ ಪ್ರದರ್ಶನದ ವೇಳೆ. ಜನ ಕುತೂಹಲಭರಿತರಾಗಿ, ಮೈಯೆಲ್ಲ ಕಣ್ಣಾಗಿ, ಬರಿದಾಗಿದ್ದ ರಂಗವನ್ನು ದಿಟ್ಟಿಸುತ್ತಿದ್ದರು. ಬರಿದು ಬರಿದು; ಮಲ್ಲರಂಗ ಇನ್ನೂ ಬರಿದು.

ಝುಲ್!

ಜನ ತಲ್ಲಣಗೊಂಡರು. ತಮ್ಮೆದುರು ರಂಗಪ್ರವೇಶಮಾಡಿದ ತರುಣನದಾರು? ಇನ್ನಾರು? ರಾಜಪುತ್ರ ವೀರಭದ್ರ. ಉತ್ಕಲಸಾರ್ವಭೌಮ ಪ್ರತಾಪರುದ್ರನ ನಚ್ಚಿನ ಕುವರ ವೀರಭದ್ರ. ಕೊಂಡವೀಡಿನಲ್ಲಿ ಕೃಷ್ಣರಾಯನಿಗೆ ಕೈಸೆರೆಯಾದ ಖಡ್ಗವಿದ್ಯಾನಿಪುಣ, ಸಿಂಹಗಂಭೀರ ವೀರಭದ್ರ. ರಾಜಕುಮಾರ ಸಾಮಾನ್ಯರಂತೆ ಮಲ್ಲರಂಗದಲ್ಲಿ ಕೈಚಳಕ ತೋರುವುದೆ! ವೀರಭದ್ರ ರಂಗಕ್ಕೆ ನೆಗೆದವನೆ ಕತ್ತಿಯನ್ನು ಒರೆಯಿಂದ ಸಳಕ್ಕನೆ ಕಳಚಿ, ತಿರುಗಿಸತೊಡಗಿದನು.

ರಾಜಪುತ್ರನ ಕತ್ತಿವರಸೆಯ ವಿವಿಧ ಚಮತ್ಕಾರಗಳನ್ನು ನೋಡಿ ಪೊಟ್ಟನೂರ ಪೌರರು ಅಚ್ಚರಿಪಟ್ಟರು. ತಮ್ಮ ರಾಜ ಕುಮಾರನ ಪ್ರೌಢಿಮೆಗಾಗಿ ಹರ್ಷಪ್ರದರ್ಶನ ಮಾಡಿದರು.

ಗದ್ದುಗೆಯಿಂದ ವೀಕ್ಷಿಸುತ್ತಿದ್ದ ರಾಯ ಮೂಗುಮುರಿದನು. ವಿಜಯನಗರದ ಹಲಹಲವು ನಿಪುಣರು ವಿವಿಧ ರೀತಿಯಾಗಿ ಚಮತ್ಕಾರ, ಕತ್ತಿ ಪ್ರದರ್ಶನಮಾಡಿದ್ದರೂ ನೆರೆದ ಜನ ಇಷ್ಟೊಂದು ಹರ್ಷೋದ್ಗಾರ ಮಾಡಿರಲಿಲ್ಲ. ಉತ್ಕಲದ ವ್ಯಕ್ತಿಯೊಬ್ಬ ತನ್ನೆಲ್ಲ ಮಲ್ಲರಿಗಿಂತ ಹೆಚ್ಚು ಆಕರ್ಷಕನಾಯಕನಾಗುವುದು ವಿಜಯನಗರಕ್ಕೆ ಅಪಮಾನ ವಲ್ಲವೆ! ಖಡ್ಗವಿದ್ಯಾನಿಪುಣನಾದ ವಿಜಯನಗರದ ಯೋಧನೊಂದಿಗೆ ಖಡ್ಗಯುದ್ಧಮಾಡಬೇಕೆಂದು ವೀರಭದ್ರನಿಗೆ ರಾಯ ಹೇಳಿಕಳುಹಿಸಿದನು. ವೀರಭದ್ರ ಅಪಮಾನವನ್ನು ಸಹಿಸದೆ ಕ್ರೋಧತಾಮ್ರಾಕ್ಷನಾದನು.

'ರಾಜಪುತ್ರ ಪರಕೀಯ ರಾಜಪುತ್ರನೊಂದಿಗೆ ಮಾತ್ರ ಖಡ್ಗಯುದ್ಧ ಮಾಡಿಯಾನು. ಯಕಶ್ಚಿತ ಯೋಧನೊಂದಿಗೆ ಸೆಣಸುವುದು ರಾಜರಕ್ತಕ್ಕೇ ಕಲಂಕ.'

'ನೀವು ಯೋಧನೊಂದಿಗೇ ಸೆಣಸಬೇಕೆಂದು ಮಹಾರಾಜರ ಆಣತಿ' ಎಂದನು ದೂತ.

'ರಾಜಪುತ್ರನ ನೆತ್ತರಿಗೆ ರಾಜಪುತ್ರನ ನೆತ್ತರೇ ಸಮ. ವಿಜಯನಗರದ ರಾಜಕುಮಾರರಲ್ಲಿ ಯಾರಾದರೂ ಬಂದು ನಿಲ್ಲಲಿ ; ಕ್ಷಣಾರ್ಧದಲ್ಲಿ ರುಂಡವನ್ನು ಹಾರಿಸುವೆನು.'

'ರಾಜಾಜ್ಞೆ ಬದಲಿಸದು. ರಾಜಾಜ್ಞೆಯನ್ನು ಧಿಕ್ಕಾರಮಾಡಿದ ಅಪರಾಧಕ್ಕೆ ಮರಣದಂಡನೆಯೇ ಶಿಕ್ಷೆ.'

ಶತ್ರುಹತ ಮಾಡಲೆಣಿಸಿದ್ದ ವೀರಭದ್ರನ ಕೂರ್ಗತ್ತಿ ಚಳಕ್ಕನೆ ಚಲಿಸಿದಂತಾಯ್ತು; ಇಲ್ಲವೇನೋ ಎಂದು ಕೊಂಡರು ಕೆಲವರು. ಈಗ ವೀರಭದ್ರ ಸ್ತಬ್ಧ. ದೂತ ಮಾತನ್ನು ಪುನರುಚ್ಚರಿಸಿದರೂ ವೀರಭದ್ರ ಮೌನ. ದೂತ

ಹಿಂದಿರುಗಿ ಅರಸ ಆಸೀನನಾಗಿದ್ದ ಗದ್ದುಗೆಯ ಬುಡದಲ್ಲಿ ಅಪ್ಪಣೆಯೇನೆಂದು ಬೇಡುವವನಂತೆ ತಲೆವಾಗಿನಿಂತನು. ಮಲ್ಲರಂಗದಲ್ಲಿದ್ದ ವೀರಭದ್ರ ಶಿಲಾಪ್ರತಿಮೆಯಂತೆ ನಿಶ್ಚಲನಾಗಿ ನಿಂತಿದ್ದುದನ್ನು ವೀಕ್ಷಿಸಿ ಜನಜಂಗುಳಿ ಕಕ್ಕಾವಿಕ್ಕಿಯಾಯ್ತು. ಕೃಷ್ಣದೇವರಾಯ ಮಂದಸ್ಮಿತನಾಗಿ ಗದ್ದುಗೆಯಿಂದಿಳಿದು ಗಜಗಂಭೀರಗಮನದಿಂದ ರಂಗಕ್ಕೆ ನಡೆತಂದು, ಕೈಬೆತ್ತದ ಕೊನೆಯನ್ನು ವೀರಭದ್ರನ ಮುಖಕ್ಕೆ ಸೋಕಿಸಿದನು. ರಾಜಕುವರನ ರುಂಡ ಕಳಕ್ಕನೆ ನೆಲಕ್ಕುರುಳಿತು. ನೆರೆದ ಜನ ಹಾಹಾಕಾರ ಮಾಡಿದರು. ಯಕಶ್ಚಿತನೊಬ್ಬನೆದುರು ಸಮುಸಮನಾಗಿ ನಿಂತು ಸೆಣಸುವ ಅವಮಾನಕ್ಕಿಂತ ಪ್ರಾಣತ್ಯಾಗವೇ ಲೇಸೆಂದು ರಾಜಕುವರ ಮುಸೆವೆತ್ತ ಕೂರ್ಗತ್ತಿಯಿಂದ ತನ್ನ ಕಂಠಚ್ಛೇದನ ಮಾಡಿಕೊಂಡ ಚಳಕದಲ್ಲಿ ಆದದ್ದೇನೆಂಬುದು ಜನಜಂಗುಳಿಗೆ ಅರಿಯದಾಗಿತ್ತು. ಖಡ್ಗವಿದ್ಯಾನಿಪುಣನಾದ ರಾಯ ಆದ ಅಸಂಗತವನ್ನು ತಟಕ್ಕನೆ ಅರಿತುಕೊಂಡಿದ್ದನು.

ನೆರೆದ ಜನರಲ್ಲಿ, ಆದ ಘಟನೆಗಾಗಿ ಅಚ್ಚರಿಪಟ್ಟವರು ಕೆಲವರು; ರಾಜಕುಮಾರನ ದುರಂತ ಪ್ರಾಣತ್ಯಾಗಕ್ಕಾಗಿ ಖೇದಗೊಂಡವರು ಕೆಲವರು; ರಾಜಕುವರನಲ್ಲಿ ರಾಯನ ಉದ್ಧಟವರ್ತನೆಯಿಂದ ಅಸಮಾಧಾನಗೊಂಡವರು ಕೆಲವರು. ವೀರಭದ್ರನ ಪ್ರಾಣತ್ಯಾಗದ ವಾರ್ತೆ ಉತ್ಕಲದಲ್ಲೆಲ್ಲ ಕಾಡ್ಗಿಚ್ಚಿನಂತೆ ಹಬ್ಬಿತು; ಕಿವಿಗೆ ಬಿದ್ದಾಗ 'ಗಜಪತಿ' ಬೆಚ್ಚಿದನು, ಕಂಬನಿ ಮಿಡಿದನು. ತನ್ನ ಪಟ್ಟಮಹಿಷಿ, ಯುವರಾಜ ರಾಮಚಂದ್ರದೇವ ಶತ್ರುವಿನ ಬಂಧನದಲ್ಲಿ! ಉತ್ಕಲಸಿಂಹಾಸನಕ್ಕೆ ಅಪಮಾನವೆಸಗಬೇಕೆಂಬ ರಾಯನ ಉದ್ದೇಶವೇ ರಾಜಕುವರ ವೀರಭದ್ರನ ಮರಣಕಾರಣ. ಒಬ್ಬ ಕುವರನಿಗೆ ಅಪಮೃತ್ಯು ಸಂಭವಿಸಿದಮೇಲೆ ಇನ್ನೊಬ್ಬ ಕುವರನಿಗೂ ಮತ್ತಾವ ದುರ್ದೆಸೆ ಕಾದಿದೆಯೋ! ತನ್ನ ರಾಣಿಗೆ ಇನ್ನೆಂಥ ಅವಮಾನ ಪ್ರಸಂಗ ಒದಗೀತೋ! ತನ್ನ ಸಮಸ್ತ ಸಾಮ್ರಾಜ್ಯವೂ ಉಧ್ವಸ್ತವಾದಾಗ ಬಾಗದ ಗಜಪತಿ ಈಗ ತಗ್ಗಿದನು. ಕ್ಷಾತ್ರವೃತ್ತಿಯನ್ನನುಸರಿಸಿ ಸಮಗ್ರ ಸಾಮ್ರಾಜ್ಯವನ್ನು, ಪತ್ನೀಪುತ್ರರನ್ನು ಕಳೆದುಕೊಂಡಾಯ್ತು. ಇನ್ನು ವ್ಯರ್ಥ

ಛಲದಿಂದೇನು; ಕ್ಷಾತ್ರವೃತ್ತಿಯ ಸಾಮರ್ಥ್ಯ ನಿಷ್ಫಲವಾಗಿದ್ದರೆ ಸಂಧಾನದ ಸಂಯಮನ ಇನ್ನೂ ತೆರವು ದಾರಿ. ಸಂಧಾನಕ್ಕಾಗಿ ಆಪ್ತ ಅಧಿಕಾರಿಯನ್ನು ಸಾಳುವ ತಿಮ್ಮನ ಬಳಿಗೆ ಅಟ್ಟಿದನು.



ಹಲವಾರು ಉತ್ಕಲಾಧಿಪರು ವಿಜಯಸಾಮ್ರಾಜ್ಯದಲ್ಲಿ ಪದೇ ಪದೇ ನುಗ್ಗಿ ಉಪಟಳವೆಸಗಿದುದಕ್ಕೆಲ್ಲ ಪ್ರತೀಕಾರವಾಗಿ ಕೃಷ್ಣದೇವರಾಯ ಸಮಗ್ರ ಉತ್ಕಲ ಸಾಮ್ರಾಜ್ಯವನ್ನೇ ಉಧ್ವಸ್ತಗೊಳಿಸಿಯಾಯ್ತು. ರಾಯನ ಅಭಿಲಾಷೆ ಜೈತ್ರಯಾತ್ರೆ; ಶಾಶ್ವತ ಆಕ್ರಮಣವಲ್ಲ. ಆದರೆ ಉತ್ಕಲಾಧಿಪತಿ ಪುರುಷೋತ್ತಮ ಸಾಳುವನರಸಿಂಹನ ಕುಮಾರಿಕೆಯನ್ನು ಬಲವಂತದಿಂದ ಮದುವೆ ನಿಂದುದಕ್ಕೆ ಮುಯ್ಯಿ ತೀರಿಸಿಕೊಳ್ಳುವುದು ಉಳಿದಿತ್ತು. ಗಜಪತಿ ತನ್ನ ಕುಮಾರಿ ಜಗನ್ಮೋಹಿನಿಯನ್ನು ಕೃಷ್ಣದೇವರಾಯನಿಗೆ ಧಾರೆ ಎರೆದುಕೊಡಬೇಕೆಂದೂ, ಕೃಷ್ಣಾನದಿಯ ಉತ್ತರ ದೆಸೆಯ ಉತ್ಕಲ ರಾಜ್ಯವನ್ನೆಲ್ಲ ಗಜಪತಿಗೆ ಹಿಂದಿರುಗಿ ಕೊಡುವುದಾಗಿಯೂ ಸಾಳುವ ತಿಮ್ಮ ಹೇಳಿಕಳುಹಿದನು.

ಹಲವು ಕಾಲಗಳಿಂದ ಶತ್ರುತ್ವದಲ್ಲಿ ಕತ್ತಿಮಸೆಯುತ್ತಿದ್ದ ರಾಜಮನೆತನಗಳೆರಡು ಇದ್ದಕ್ಕಿದ್ದಂತೆ ಮೈತ್ರಿಯ ಮಧುವಿ

ನಲ್ಲಿ ಒಂದುಗೂಡಿದವು. ಉತ್ಕಲವನ್ನೇ ಉಧ್ವಸ್ತಗೊಳಿಸಿದ್ದ ಕೃಷ್ಣರಾಯ ಉತ್ಕಲಾಧಿಪತಿಯ ಜಾಮಾತನಾದನು. ಮಹಾಪಾತ್ರರಿಗೆಂದು ಸಾಳುವ ತಿಮ್ಮ ಕಳುಹಿದ್ದು ಗಜಪತಿಯ ಹಸ್ತಗತವಾಗಿದ್ದ ಸುವರ್ಣರತ್ನವಜ್ರಗಳ ಹೆಡಿಗೆಗಳೂ, ಉತ್ಕಲಾಧಿಪನ ಅಮೂಲ್ಯ ವಜ್ರರತ್ನಗಳೂ, ಆನೆ ಕುದುರೆಗಳೂ ಅಳಿಯನಿಗೆ ಕಾಣಿಕೆ ದೊರೆಯಿತು. ಯುದ್ಧ ಹೂಡಿದುದಕ್ಕಾಗಿ ಗಜಪತಿಯೂ, ಮಹಾಪಾತ್ರರೂ ರಾಯನ ಕ್ಷಮೆ ಬೇಡಿದರು. ಕೃಷ್ಣೆಯ ಉತ್ತರದ ಉತ್ಕಲ ಸಾಮ್ರಾಜ್ಯಕ್ಕೆ ಅಧಿಪತಿಯಾಗಿ ಗಜಪತಿ ಕಟಕಪುರಿಗೆ ಹಿಂದಿರುಗಿದನು.





## ಸಾಳುವ ತಿಮ್ಮನ ಚಾಣಾಕ್ಷತನ

ಭವ್ಯ ' ಭುವನವಿಜಯ ' ಅರಮನೆಯ ಒಳ ಅಂಗಳದಲ್ಲಿ ಬೆಳ್ಳಿಯ ಸರಪಣಿಗೆ ಜೋತಿದ್ದ ಹೊನ್ನ ತೂಗುಮಣೆಯಲ್ಲಿ ಜಗನ್ಮೋಹಿನಿ ಮೆಲುವಾಗಿ ತೂಗಿಕೊಳ್ಳುತ್ತಿದ್ದಳು. ತೂಗುಮಣೆ ರತ್ನವಜ್ರಗಳ ಕುಸುರಿ ಕೆಲಸದಿಂದ ಸುಶೋಭಿತ. ಉತ್ಕಲಸಾರ್ವಭೌಮನ ಕುಮಾರಿಯಾಗಿ, ಕರ್ಣಾಟಕಸಾರ್ವಭೌಮನ ಪತ್ನಿಯಾಗಿ ಆಕೆಯ ಮೈ ಅಪೂರ್ವ ವಜ್ರಗಳಿಂದ ಝುಗಝುಗಿಸಿತ್ತು. ಹೆಸರಿನಲ್ಲಿ ಮಾತ್ರವಲ್ಲದೆ ಚೆಲುವಿನಲ್ಲೂ ಜಗನ್ಮೋಹಿನಿ. ಆದರೆ ಅವಳ ಅಂತರಂಗ ತೀವ್ರ ಅಸಮಾಧಾನದಿಂದ ಸುಡುತ್ತಿತ್ತು. ಪ್ರಾಚೀನ ರಾಜವಂಶದ ಉತ್ಕಲಸಾರ್ವಭೌಮಕುಮಾರಿಯಾದ

ತಾನು ನೂತನವಾಗಿ ರಾಜ್ಯಾಕ್ರಮಣಮಾಡಿದ ದಳಪತಿಯೊಬ್ಬನ ಮಗನನ್ನು ಮದುವೆಯಾಗುವುದೆ! ಕ್ಷತ್ರಿಯಕುಲದ ಕನ್ನೆ ಕೀಳುಕುಲದವನನ್ನು ಕೂಡುವುದೆ! ತನ್ನ ಪ್ರೀತಿಯ ಪಿತನ ಸಂಪದ್ಯುಕ್ತ ಸಾಮ್ರಾಜ್ಯವನ್ನು ಸುಡುಗಾಡಾಗಿಸಿ, ಕಟಕಪುರಿಯನ್ನೇ ಅಗ್ನಿದಗ್ಧವಾಗಿಸಿದವನ ಪತ್ನಿ ತಾನಾದುದೆ! ತಂದೆಯ, ತಂದೆಯ ಸಾಮ್ರಾಜ್ಯದ ಕ್ಷೇಮಲಾಭಕ್ಕಾಗಿ ತನ್ನ ಕೈಮೀರಿ ಆಗಿಹೋದ ಮದುವೆಗಾಗಿ ಜಗನ್ಮೋಹಿನಿ ಕಳವಳಿಸಿದಳು, ಬೇಗುದಿಕೊಂಡಳು; ಅವಳ ಕಮಲನೇತ್ರಗಳಿಂದ ಮುತ್ತಿನಂತಹ ಬಿಸಿಯ ಹನಿಯೆರಡು ಜಗುಳಿದವು.

ದಾಸಿ ಓಡುತ್ತ ಬಂದಳು 'ಮಹಾರಾಣಿ. ಮಹಾರಾಜರು ಈ ದೆಸೆಗೇ ಬಿಜಯಗೈಯುತ್ತಿದಾರೆ.'

ನಿರ್ವಿಣ್ಣಳಾಗಿ ತೂಗುಯ್ಯಾಲೆಯಲ್ಲಿ ಒರಗಿದ್ದ ರಾಣಿ ಸನಿಹವೇ ಸಿಡಿಲೆರಗಿದಂತೆ ಚಮಕಿತಳಾದಳು, ಬೆಚ್ಚಿದಳು. ಹುಲಿಯ ಸುಳಿವು ಹಿಡಿದ ಹರಿಣಿಯಂತೆ ಚಕ್ಕನೆ ಹಾರಿ, ತನ್ನ ಮಂದಿರದೊಳನಾರಿ ಬಾಗಿಲು ಮುಚ್ಚಿಕೊಂಡಳು.

ಅಂದು ರಾತ್ರಿ ಕೃಷ್ಣದೇವರಾಯನಿಗೆ ಜಗನ್ಮೋಹಿನಿಯೊಂದಿಗೆ ಮೊದಲ ಶಯ್ಯೆ. ಜಗನ್ಮೋಹಿನಿಯ ಹಸ್ತಿದಂತ ನಿರ್ಮಿತ ಕೊಠಡಿಯಲ್ಲಿ ಹೊನ್ನಮಂಚ. ಮಖಮಲ್ಲಿನ ಹಾಸಿಗೆಯಮೇಲೆ ರೇಸಿಮೆಯ ಹೊದಿಕೆ. ಜಗನ್ಮೋಹಿನಿ ನಿಶ್ಶಬ್ದವಾಗಿ ಕೊಠಡಿಯಲ್ಲಿ ಕಾಲಿಟ್ಟಾಗ ಕೃಷ್ಣದೇವರಾಯನ ಆಕೃತಿ ಮಂಚದಲ್ಲಿ ಪವಡಿಸಿತ್ತು. ಬಾಗಿಲ ದೆಸೆಗೆ ಬೆನ್ನಿದ್ದು, ಮೈಗೆ ರೇಸಿಮೆಯ ಹೊದಿಕೆ ಕವಿದಿತ್ತು. ಜಗನ್ಮೋಹಿನಿ ಸಪ್ಪಳಾಗದಂತೆ ಕದ ನೂಕಿದಳು; ಕದ ಮುಚ್ಚಿತೇನೋ ಹೌದು; ಆದರೆ ಕೊನೆಯಲ್ಲಿ ತುಸು 'ಕಟ್' ಎಂದಿತು. ಜಗನ್ಮೋಹಿನಿ ಬೆಚ್ಚಿ ಮಂಚದೆಡೆ ನಿರುಕಿಸಿದಳು; ರಾಯ ನಿಶ್ಚಲ. ಜಗನ್ಮೋಹಿನಿ ಧೈರ್ಯಗೊಂಡು ಹೆಜ್ಜೆಯಮೇಲೆ ಹೆಜ್ಜೆಯಿಟ್ಟು ಮಂಚದ ಬಳಿ ಸಾರಿದಳು. ರಾಯ ನೀರವವಾಗಿ ಪವಡಿಸಿಯೇ ಇದ್ದನು. ರಾಣಿ ತನ್ನ ಕಣ್ಣನ್ನೇ ನಂಬದವಳಂತೆ, ಕೊಠಡಿಯಲ್ಲಿ ಬೇರೆ ಯಾರಾದರೂ ಇರುವರೇನೋ, ಎಂದು ಸುತ್ತ ನಿರುಕಿಸಿದಳು. ಯಾರೂ ಇಲ್ಲ. ತಾನು! ಮಂಚದಲ್ಲಿ ರಾಯ! ಅವಳ ಕೈ ತಟಕ್ಕನೆ

ಮಡಿಲಿಗೆ ಹೋಯಿತು. ಹೋದುದು ತುಸು ತಡೆದಂತೆ ತೋರಿತು. ಕೈ ತಟಕ್ಕನೆ ಕಠಾರಿಯನ್ನು ಹೊರತೆಗೆದು ನೀರವವಾಗಿ, ನಿಶ್ಚಲವಾಗಿ ಪವಡಿಸಿದ್ದ ಆಕೃತಿಯ ಬೆನ್ಗೆ ತಿವಿಯಿತು. ಚಿರ್ರೆಂದು ದ್ರವ ಚಿಮ್ಮಿತು. ಕೆಲವು ಹನಿ ಜಗನ್ಮೋಹಿನಿಯ ತುಟಿಗೂ ಸಿಡಿಯಿತು.

ಆಹ್! ಮಧುರ! ಬಹು ಮಧುರ! ಜೇನಿನಂತೆ ಮಧುರ! ನೆತ್ತರು ಉಪ್ಪೆಂದು ಜಗನ್ಮೋಹಿನಿ ಕೇಳಿ ಬಲ್ಲಳು. ಈ ರಾಯನ ನೆತ್ತರು ಸಿಹಿ. ನೆತ್ತರೇ ಸಿಹಿಯಿದ್ದಮೇಲೆ ಈತ ಇನ್ನೆಂಥ ಸಜ್ಜನ, ಸದ್ಗುಣಿ ಇರಬೇಕು! ಅರಿಯದೆ ನಾನೆಂಥ ಪ್ರಮಾದವೆಸಗಿದೆ! ಕ್ಷತ್ರಿಯಕುಲವಲ್ಲದಿದ್ದರೇನು! ಇಂಥ ಸಜ್ಜನನಾದಮೇಲೆ ಭರ್ತನಾಗಲು ತಕ್ಕವನೇ. ಹಾಯ್ ಹಾಯ್! ಇಂಥ ಸದ್ಗುಣಿಯನ್ನು ಕೊಂದು ನಾನೆಂಥ ಪಾಪಕ್ಕೆ ಗುರಿಯಾದೆ. ಉತ್ಕಲಸಾಮ್ರಾಜ್ಯವನ್ನು ಉಧ್ವಸ್ತಗೊಳಿಸಿದುದು ಈತನ ಸಾಮರ್ಥ್ಯದ ಲಾಂಛನವೇ ವಿನಹ ದೌರ್ಜನ್ಯದ ಪರಾಕಾಷ್ಠತೆಯಲ್ಲ. ನನ್ನ ಪೂರ್ವಜರೂ ವಿಜಯಸಾಮ್ರಾಜ್ಯದಲ್ಲಿ ನುಗ್ಗಿ, ಇಂಥ ಉಪಟಳವನ್ನೇ ಎಸಗಿದ್ದರಲ್ಲವೆ! ಈ ಮಹಾರಾಜ ಬಲಯುತ ನಾದಾಗ ಈತನ ಜೈತ್ರಯಾತ್ರೆ ಏನು ತಪ್ಪು! ನನ್ನ ದುಡುಕಿನಿಂದ ಪ್ರಬಲ ಪರಾಕ್ರಮಿ ಸಾರ್ವಭೌಮ ನಿಹತನಾದ ನಲ್ಲದೆ, ನನ್ನ ಭರ್ತನೂ ಅಳಿದಂತಾಯ್ತು. ನನ್ನ ದುಷ್ಕೃತ್ಯಕ್ಕೆ ನನ್ನ ಮರಣವೇ ಶಿಕ್ಷೆ. ಎದೆಗೆ ತಿವಿದು ಕೊಳ್ಳಲು ಕಠಾರಿಯನ್ನು ಎತ್ತಿದಳು.

'ತಾಳು, ತಾಳು. ಮಹಾರಾಣಿ'

ಗಂಭೀರ ನಿಸ್ವನವನ್ನು ಆಕರ್ಣಿಸಿ ಮಹಾರಾಣಿ ಚಮಕಿತಳಾದಳು. ಮಂತ್ರಿ ಸಾಳುವ ತಿಮ್ಮ ಗುಪ್ತದ್ವಾರದಿಂದ ಕೊಠಡಿಯೊಳಗೆ ಆಗಮಿಸಿದ್ದನು. ಅವನ ಮೊಗ ವೃಥ, ಗಂಭೀರ. ಸಾರ್ವಭೌಮರ ಹನನ ದಿನಚರಿಯ ಘಟನೆ ಯೇನೋ ಎಂಬಂತೆ ಸಾಳುವ ತಿಮ್ಮ ನಿರ್ವಿಕಾರ.

‘ ದುಡುಕೇಕೆ, ಮಹಾರಾಣಿ ? ’

‘ ಇಂಥ ದುಷ್ಕೃತ್ಯದ ನಂತರ ನನಗೆ ಜೀವಧಾರಣೆಯೆ ? ’

‘ ನಿನ್ನ ಹೃದಯ ಇಷ್ಟು ಬೇಗ ಪಶ್ಚಾತ್ತಾಪದಗ್ಧವಾಗುವುದು ಸತ್ಯವೆ ? ’

‘ ನನ್ನ ಪ್ರಾಣತ್ಯಾಗಪ್ರಯತ್ನವೇ ಸಾಕ್ಷಿ’

‘ ಮಹಾರಾಣಿ. ಪಕ್ಕದ ಕೊಠಡಿಗೆ ಬಾ ’

ಗಾರುಡಿಗನ ಮೋಡಿಗೆ ಹಾವು ಹಿಂಬಾಲಿಸುವಂತೆ ಮಹಾರಾಣಿ ಮಂತ್ರಿಯ ಹಿಂದೆ ಸಾಗಿದಳು. ಪಕ್ಕದ ಕೊಠಡಿಯಲ್ಲಿ ಕೃಷ್ಣರಾಯಮಹಾರಾಯ ಅಲಂಕೃತವಾಗಿ ಆಸೀನನಾಗಿದ್ದನು ; ಅವನ ಸುಂದರವದನ ಶಾಂತ, ನಿರ್ವಿಕಾರ.

‘ ನನ್ನ ಕಣ್ಣುಗಳನ್ನು ನಂಬಲಾಪೆನೆ ? ’ ಮಹಾರಾಣಿ ಗದ್ಗದಿಸಿದಳು.

‘ ನೀನು ದ್ವೇಷಾನಲದಿಂದ ದಹಿಸುತ್ತಿದೀಯೆಂಬುವನ್ನು ವಿವಾಹ ಸಮಾರಂಭದಲ್ಲೇ ಕಂಡುಕೊಂಡೆ. ಪ್ರಥಮ ಶಯ್ಯೆಯಲ್ಲೇ ಮಹಾರಾಜನನ್ನು ಕೊಲೆಗೀಡುಮಾಡುವ ನಿನ್ನ ಕಾರಸ್ಥಾನ ನನಗೆ ಸುಳಿವು ಹರಿಯಿತು. ಮಹಾರಾಜನ ಹೋಲಿಕೆಯ ಮಯಣದ ಮೂರ್ತಿಯನ್ನು ಮಾಡಿಸಿ, ಒಳಗೆ ಜೇನುತುಪ್ಪವನ್ನು ತುಂಬಿಸಿ, ಮಂಚದಲ್ಲಿ ನೈಜ ಮಹಾರಾಜನ ಬದಲು ಮಯಣದ ಮಹಾರಾಜನನ್ನು ಮಲಗಿಸಿ, ಮುಸುಕು ಹೊದ್ದಿಸಿದೆ. ನೀ ಕಠಾರಿಯಿಂದ ತಿವಿದಾಗ ನಿನ್ನ ತುಟಿಗೆ ಸಿಡಿದುದು ನೆತ್ತರಲ್ಲ, ಜೇನಹನಿ ’

ಸಾಳುವ ತಿಮ್ಮನ ಮಾತು ಕೇಳಕೇಳುತ್ತ ಜಗನ್ಮೋಹಿನಿ ಅವಮಾನದಿಂದ, ಪಶ್ಚಾತ್ತಾಪದಿಂದ ಅವನತ ಮುಖಿಯಾದಳು. ಅವಳ ಕಣ್ಣುಗಳು ಹನಿಗೂಡಿದವು. ‘ ನೀನೀಗ ದ್ವೇಷನಿರ್ಮುಕ್ತಳಾಗಿದ್ದರೆ, ಯತ್ನಿಸಿದ ಅಕೃತ್ಯಕ್ಕಾಗಿ ಪಶ್ಚಾತ್ತಾಪಗೊಂಡಿದ್ದರೆ ಮಹಾರಾಜನ ಕ್ಷಮೆ ಬೇಡು.’

ಮಹಾರಾಣಿ ಭೂಶಾಯಿನಿಯಾಗಿ, ಭರ್ತನ ಪದಸ್ಪರ್ಶಿಯಾಗಿ ದೀರ್ಘದಂಡ ಪ್ರಣಾಮಮಾಡಿದಳು. ಅವಳ ಕಂಬನಿ ರಾಯನ ಹೆಜ್ಜೆಯಮೇಲೆ ಜಗುಳಿದವು. ರಾಯ ಹಿಂಜರಿದು ದೂರ ನಿಂತನು.

'ಜಗನ್ಮೋಹಿನಿ. ನೀನು ವ್ಯಾಘ್ರಿಣಿಯಂತೆ ಸುಂದರ. ಮತ್ತಾವ ದುಷ್ಕಾಲದಲ್ಲಿ ನೀ ಮೇಲೆ ಬೀಳುವಿಯೋ ಹೇಳಬಲ್ಲವರಾರು !'

ಮಹಾರಾಜನ ಆಜ್ಞೆಯಂತೆ ವಿಜಯನಗರಕ್ಕೆ ದೂರವಾದ ಕಂಭಂನಲ್ಲಿನ ಅರಮನೆಯಲ್ಲಿ ಜಗನ್ಮೋಹಿನಿ ನೆಲೆಯಾದಳು. ರಾಜರಾಣಿಯರ ಸಮಾಗಮಕ್ಕಾಗಿ ಸಾಳುವ ತಿಮ್ಮ ಎಸಗಿದ ಪ್ರಯತ್ನಗಳೆಲ್ಲ ವಿಫಲ. ಮಹಾರಾಣಿ ವಿರಹವ್ಯಥೆಯಲ್ಲೇ ಹಲವಾರು ವರ್ಷಗಳನ್ನು ನೂಕಿದಳು. ಮಂತ್ರಿಯ ಸತತ ಪ್ರಯತ್ನ ಕೊನೆಗೂ ಫಲದಾಯಕ; ರಾಯ ಜಗನ್ಮೋಹಿನಿಯನ್ನು ಪರಿಗ್ರಹಿಸಿ, ವಿಜಯನಗರಕ್ಕೆ ಕರೆಸಿಕೊಂಡನು.

* * * *

ಕೃಷ್ಣದೇವರಾಯನ ಸಿಂಹಾಸನಾರೋಹಣಕ್ಕೆ ಕಾರಣನಾದ ಸಾಳುವ ತಿಮ್ಮ ಮಂತ್ರಿಯಾಗಿ ದಂಡನಾಯಕನಾಗಿ ರಾಯನ ಬಲಗೈಯಾಗಿದ್ದನು. ರಾಯನ ಚಿಕ್ಕಂದಿನಿಂದಲೂ ಅಪ್ಪನಂತೆ ಇದ್ದವನು, ಅರಸನಾದಮೇಲೂ ಅದೇ ರೀತಿಯ ಹಿತಚಿಂತಕನಾಗಿದ್ದು 'ಅಪ್ಪಾಜಿ' ಎಂದೇ ರಾಯನಿಂದ ಕರೆಯಲ್ಪಡುತ್ತಿದ್ದನು. ಬುದ್ಧಿಯಲ್ಲಿ ಬೃಹಸ್ಪತಿಯಾಗಿ ಚಾಣಿಕ್ಯನಾಗಿ, ಶೌರ್ಯದಲ್ಲಿ ಅಸಮನಾಗಿ, ರೂಪದಲ್ಲಿ ಮನ್ಮಥನಾಗಿದ್ದ ಸಾಳುವ ತಿಮ್ಮನಂಥ ಮಂತ್ರಿ ಬಹು ಅಪರೂಪ.

ಚಿಕ್ಕಂದಿನಲ್ಲೇ ಸಾಳುವ ತಿಮ್ಮನಿಗೆ ತಂದೆ ತಾಯಿ ತೀರಿಹೋಗಿದ್ದರು. ಬಾಲ್ಯದಲ್ಲೇ ಕಡು ಬಡತನದ ಬೇಗೆಯನ್ನು ಅನುಭವಿಸಿದ್ದನು; ತಿರುಪತಿಯ ಸನಿಹದ ಬನದಲ್ಲಿ ದನಕರುಗಳನ್ನು ಮೇಯಿಸಿ ಬದುಕು ಹೊರೆಯುವುದು. ಒಂದು



ಮಧ್ಯಾಹ್ನ ಸುಡುಬಿಸಿಲಲ್ಲಿ ತಿಮ್ಮ ಬಳಲಿ, ಬಯಲಲ್ಲೆ ನಿದ್ದೆ ಹೋಗಿದ್ದನು. ಬಿಸಿಲ ಕಾವಿಗೆ ಹುತ್ತದಿಂದ ಹೊರಬಂದ ಸರ್ಪವೊಂದು ಸನಿಹ ಸಾರಿದುದು ಮಲಗಿದ ಹುಡುಗನನ್ನು ಕಚ್ಚದೆ, ಅವನ ತಲೆಯ ಮೇಲೆ ಹೆಡೆಬಿಚ್ಚಿ ಬಿಸಿಲಿಗೆ ಮರೆಮಾಡಿತ್ತು. ಅನತಿ ದೂರದಲ್ಲಿ ಸಾಗಿದ್ದ ಸನ್ಯಾಸಿಯೊಬ್ಬ ಈ ಅಚ್ಚರಿಯನ್ನು ನೋಡುತ್ತ ನಿಂತವನು ಸರ್ಪ ಹರಿದುಹೋದಮೇಲೆ ಹುಡುಗನ ಬಳಿ ಬಂದು ಎಬ್ಬಿಸಿದನು.

'ಹುಡುಗ! ಹಾವು ನಿನ್ನ ತಲೆಯಮೇಲೆ ಹೆಡೆ ಬಿಚ್ಚಿದ ಅಚ್ಚರಿಯನ್ನು ನೀನು ಕಾಣಲಿಲ್ಲ. ಮುಂದೆ ನೀನು ಉನ್ನತ ಪದವಿಗೇರುವೆ; ನಿನ್ನ ಪದವಿ, ಅಧಿಕಾರಗಳನ್ನು ನಾಡಿನ ಒಳಿತಿಗಾಗಿ ಉಪಯೋಗಿಸು.'

ದೂರದ ಬಂಧು ಚಿಟ್ಟಿಗಂಗಾಮಾತ್ಯನ ಆಶ್ರಯದಲ್ಲಿ ತಿಮ್ಮ ವಿದ್ಯಾಭ್ಯಾಸ ಮಾಡಿದ; ಸಂಸ್ಕೃತ, ಕನ್ನಡ, ತೆಲುಗು ಭಾಷೆಗಳಲ್ಲಿ ಪಾರಂಗತನಾದ.

ವಿಜಯನಗರದರಸು ಸಾಳುವ ನರಸಿಂಹನ ಮಂತ್ರಿ ಉದ್ದಂಡ ವಾರ್ಧಕ್ಯದಿಂದ ಜರ್ಜರಿತನಾಗಿರಲು, ಅವನ ನೆರವಿಗಾಗಿ ಸಹಾಯಕಮಂತ್ರಿಯನ್ನು ನೇಮಿಸಬೇಕಾಯ್ತು. ಇಂಥ ಉನ್ನತ ಪದವಿಗೆ ತಕ್ಕ ಅರ್ಹತೆ, ಚಾತುರ್ಯ ಇರುವವನನ್ನು ಹುಡುಕುವುದು ಸುಲಭವಲ್ಲ. ಅರಸು ಆಯ್ಕೆಗಾಗಿ ಪರೀಕ್ಷೆಯನ್ನು ಏರ್ಪಡಿಸಿದನು. ವಿದ್ಯಾಗರ್ವಿತರೂ

ಚತುರರೂ ಆದ ಅನೇಕಾನೇಕ ಜನ ನಿಯಮಿತ ದಿನದಲ್ಲಿ ಆಸ್ಥಾನದಲ್ಲಿ ನೆರೆದರು. ಅರಸು ತಾಳೆಗರಿಯ ಮೇಲೆ ಗೆರೆಯೆಳೆದು, ಈ ಗೆರೆಯನ್ನು ಮುಟ್ಟದೆಯೆ ಯಾವನು ಅದನ್ನು ಸಣ್ಣದಾಗಿಸುತ್ತಾನೋ ಆತನೇ ಸಹಾಯಕಮಂತ್ರಿಯಾಗಲು ಅರ್ಹ, ಎಂದನು. ರಾಜಸಭೆಯಲ್ಲಿ ಕಿಕ್ಕಿರಿದ ಜನರೆಲ್ಲರಿಗೂ ಸಮಸ್ಯೆ ಅಸಂಬದ್ಧವೆಂದೇ ಭಾಸವಾಯ್ತು; ಸಹಾಯಕಮಂತ್ರಿಯ ಆಯ್ಕೆ ಅರಸನ ಉದ್ದೇಶವಲ್ಲವೆಂದೂ, ತಮಗೆಲ್ಲ ಅವಮಾನಮಾಡಲೆಂದೇ ಈ ಅರ್ಥವಿಹೀನ ಸಮಸ್ಯೆಯನ್ನು ಒಡ್ಡಿರುವನೆಂದೂ ಭಾವಿಸಿದರು. ಕಾಲಾವಧಿಯನಂತರ, ಉತ್ತರವೀಯಲು ಎದ್ದು ನಿಂತವನೆಂದರೆ ತಿಮ್ಮ ಮಾತ್ರ. ತಿಮ್ಮ ಮುಂದೆ ಸಾಗಿ, ತಾಳೆಗರಿಯಲ್ಲಿನ ಗೆರೆಯ ಪಕ್ಕದಲ್ಲಿ ಅದಕ್ಕಿಂತ ಉದ್ದವಾದ ಗೆರೆ ಎಳೆದು, ಮೊದಲ ಗೆರೆಯನ್ನು ಮುಟ್ಟದೆಯೆ ಅದನ್ನು ಚಿಕ್ಕದಾಗಿಸಿದೆ, ಎಂದನು. ಅಂದಿನಿಂದ, ತಿಮ್ಮ ವಿಜಯಸಾಮ್ರಾಜ್ಯದ ಸಹಾಯಕ ಮಂತ್ರಿ; ಉದ್ದಂಡನ ಮರಣಾನಂತರ ತಿಮ್ಮನೇ ಪ್ರಧಾನ ಮಂತ್ರಿ. ಬಾಲ್ಯದಲ್ಲಿ ಸರ್ಪ ತಲೆಯ ಮೇಲೆ ಹೆಡೆಯಾಡಿಸಿದಾಗ ಯೋಗಿ ಬಯಸಿದ ಅಭಿಲಾಷೆಯನ್ನು ಸಾಳುವ ತಿಮ್ಮ ಸ್ವಾಭಾವಿಕವಾಗಿಯೆ ಪೂರೈಸಿದ.

ಸಾಳುವ ತಿಮ್ಮನ ವ್ಯವಹಾರಕೌಶಲ್ಯ, ಚಾಣಾಕ್ಷತನ ರಾಜಕೀಯದ ಮಹಾಘಟನೆಗಳಲ್ಲಿ ಮಾತ್ರವಲ್ಲದೆ ಸಣ್ಣ ಪುಟ್ಟ ತೀರ್ಮಾನಗಳಲ್ಲೂ ಗೋಚರ. ಶ್ರೀಮಂತನೊಬ್ಬ ಅವಸಾನಕಾಲದಲ್ಲಿ ತನ್ನ ಮೂವರು ಮಕ್ಕಳಿಗೆ ಆಸ್ತಿ ಹಂಚಿದನು. ಆಸ್ತಿಯಲ್ಲಿ ಹದಿನೇಳು ಆನೆಗಳೂ ಇದ್ದವು. ಆನೆಗಳಲ್ಲಿ ಅರ್ಧವನ್ನು ಹಿರಿಯನೂ, ಮೂರರಲ್ಲಿ ಒಂದು ಭಾಗವನ್ನು ನಡುವಣವನೂ, ಒಂಬತ್ತರಲ್ಲಿ ಒಂದು ಭಾಗವನ್ನು ಕೊನೆಯವನೂ ತೆಗೆದುಕೊಳ್ಳಬೇಕೆಂದು ಹೇಳಿ ಸತ್ತನು. ಮಿಕ್ಕ ಆಸ್ತಿಯನ್ನು ಹಂಚಿಕೊಂಡು ಮುಗಿದಾದರೂ, ಆನೆಗಳ ಹಂಚಿಕೆ ನಿಷ್ಕರ್ಷೆಯಾಗಲಿಲ್ಲ. ಯಾವ ಪಂಚಾಯಿತನೂ ಗಣಿತಜ್ಞನೂ ಆನೆಗಳನ್ನು ತಂದೆಯ ಮಾತಿನಂತೆ ಹಂಚಲು ಅಸಮರ್ಥ. ವ್ಯಾಜ್ಯ ಮಂತ್ರಿ ಸಾಳುವ ತಿಮ್ಮನ ಬಳಿ ಬಂತು; ನ್ಯಾಯನಿಷ್ಕರ್ಷೆಗಾಗಿ ಮಂತ್ರಿ ತನ್ನ ಆನೆಯನ್ನೇರಿ ಶ್ರೀಮಂತನ ಸದನಕ್ಕೆ ಆಗಮಿಸಿದನು. ಹದಿನೇಳು

ಆನೆಗಳನ್ನೂ ಸಾಲಾಗಿ ನಿಲ್ಲಿಸಿ, ತನ್ನ ಆನೆಯನ್ನೂ ಅದೇ ಸಾಲಿನಲ್ಲಿ ನಿಲ್ಲಿಸಿಕೊಂಡನು. ಒಟ್ಟು ಹದಿನೆಂಟು ಆನೆಗಳಾದವು. ಹಿರಿಯನಿಗೆ ಅರ್ಧ ಎಂದರೆ ಒಂಬತ್ತು; ನಡುವಣವನಿಗೆ ಮೂರನೆ ಒಂದು ಭಾಗವಾದ ಆರು; ಕಿರಿಯವನಿಗೆ ಒಂಬತ್ತನೆ ಒಂದು ಭಾಗವಾದ ಎರಡು ಆನೆಗಳನ್ನು ಕೊಟ್ಟನು. ಹೀಗೆ ಹದಿನೇಳು ಆನೆಗಳನ್ನೂ ತಂದೆಯ ಆದೇಶದಂತೆ ಮೂವರು ಮಕ್ಕಳಿಗೂ ಹಂಚಿಯಾಯ್ತು. ಉಳಿದ ತನ್ನ ಆನೆಯನ್ನೇರಿ ಮಂತ್ರಿ ಮಾಲ್ಯಕೂಟಕ್ಕೆ ನಿರ್ಗಮಿಸಿದನು.

ವಿಜಯನಗರದ ಆಸ್ಥಾನದಲ್ಲಿದ್ದ ಕೆಲವು ಪಂಡಿತರಿಗೆ ತಮ್ಮ ವಿದ್ವತ್ತಿನ ಬಗೆಗೆ ವಿಶೇಷ ಅಹಂಕಾರ ಬಂದಿತ್ತು. ತಾವು ಸಾಳುವ ತಿಮ್ಮನಿಗಿಂತ ಪ್ರಾಜ್ಞರೆಂದೂ, ಮಂತ್ರಿಪದವಿಗೆ ಅವನಿಗಿಂತ ತಮಗೇ ಅರ್ಹತೆ ಹೆಚ್ಚೆಂದೂ ಅವರ ಭಾವನೆ. ಪಂಡಿತರೆಲ್ಲ ಗುಂಪುಗೂಡಿ ರಾಯನ ಬಳಿ ಸಾರಿ, ತಮ್ಮ ಮನೋಗತವನ್ನು ಅರುಹಿದರು.

'ನಿಮ್ಮ ಪಾಂಡಿತ್ಯದಲ್ಲಿ ನನಗೆ ಸಂಪೂರ್ಣ ಗೌರವ. ಆದರೆ ವ್ಯವಹಾರಕೌಶಲ್ಯ ಪುಸ್ತಕಪಾಂಡಿತ್ಯದಿಂದ ಉಂಟಾಗುವುದಿಲ್ಲ. ನಾನು ಕೇಳುವ ಪ್ರಶ್ನೆಗಳಿಗೆ ನಿಮ್ಮಲ್ಲಿ ಯಾರು ಉತ್ತರಕೊಡಲು ಸಮರ್ಥರಾಗುವರೋ ಅವರನ್ನು ಮಂತ್ರಿಯನ್ನಾಗಿ ಮಾಡುವೆ. "ಬದುಕಿದರೆ ಬದುಕುವನಾರು?" ಎಂಬುದು ಮೊದಲ ಪ್ರಶ್ನೆ. "ಸತ್ತರೆ ಬದುಕುವವನಾರು?" ಎಂಬುದು ಎರಡನೆ ಪ್ರಶ್ನೆ........'

ಹೀಗೆ ರಾಯ ಐದು ಪ್ರಶ್ನೆಗಳನ್ನಿತ್ತು, ಎಲ್ಲರೂ ತಮ್ಮ ತಮ್ಮ ಉತ್ತರಗಳನ್ನು ಸಿದ್ಧಗೊಳಿಸಿಕೊಂಡು ಮರುದಿನದ ರಾಜಸಭೆಗೆ ಬರಬೇಕೆಂದನು.

ರಾಜಸಭೆ ನೆರೆದಿದೆ. ಈ ಜಟಿಲ ಪ್ರಶ್ನೆಗಳ ಕಗ್ಗಂಟನ್ನು ಬಿಡಿಸಲು ಪಂಡಿತವರ್ಯರೆಲ್ಲ ರಾತ್ರಿ ನಿದ್ದೆಗೆಟ್ಟು ಕೂಡ ಹೆಣಗಾಡಿ, ಈಗ ಬಂದು ಸೇರಿದಾರೆ. ಒಬ್ಬೊಬ್ಬರೂ ತಮ್ಮ ತಮ್ಮ ಉತ್ತರವನ್ನು ಸಿದ್ಧಪಡಿಸಿಕೊಂಡು ಬಂದಿದಾರೆ. ಸಾಳುವ ತಿಮ್ಮ ಮಂತ್ರಿಪೀಠದಲ್ಲಿ ಆಸೀನನಾಗದೆ, ಮೂಲೆಯಲ್ಲಿ ಕುಳಿತಿದಾನೆ.

ರಾಯನ ಗಂಭೀರ ಧ್ವನಿ ಹೊರಹೊಮ್ಮಿತು. ‘ ಬದುಕಿದರೆ ಬದುಕುವನಾರು, ಎಂಬ ಪ್ರಶ್ನೆಗೆ ಉತ್ತರವೇನು ?’

ಪಂಡಿತನಿಚಯದಲ್ಲಿ ಪ್ರಾಜ್ಞತಮನೆಂದು ಪರಿಗಣಿತನಾದವನು ಎದ್ದು ನಿಂತನು. ‘ ಮಹಾಪ್ರಭು. ತಮ್ಮ ಪ್ರಶ್ನೆಗಳು ಬಹು ಜಟಿಲ. ಒಂದೊಂದು ಪ್ರಶ್ನೆಯನ್ನೂ ಹಲವು ತೆರ ಪರಿಗಣಿಸಿ, ಹಲವು ತೆರ ಉತ್ತರಿಸಬಹುದು ; ಪ್ರತಿ ಉತ್ತರವೂ ಸರಿಯೆಂದು ಅನಿಸುತ್ತದೆ ಒಮ್ಮೊಮ್ಮೆ ; ಪ್ರತಿ ಉತ್ತರವೂ ತಪ್ಪೆಂದು ಅನಿಸುತ್ತದೆ ಒಮ್ಮೊಮ್ಮೆ. ನನಗೆ ಸರಿತೋರಿದ ಉತ್ತರವೀಯುವೆ, ಎಂದವನೆ, ಹೊನ ಹರಯದವನೊಬ್ಬನನ್ನು ಸಭೆಯ ನಡುವೆ ಕರೆತಂದು ನಿಲಿಸಿ ‘ಈತನಿಗೆ ಇನ್ನೂ ಹದಿನೆಂಟು ವಯಸ್ಸು. ಅದ್ಭುತ ಕಾಯಶಕ್ತಿ. ಇವನು ಬದುಕಿದರೆ ಬದುಕಬಹುದು ’ ಎಂದನು.

ಉತ್ತರದ ಹೆಡ್ಡತನ ರಾಯನಿಗೆ ನಗೆ ಬರಿಸಿತು. ಇತರ ಪಂಡಿತರ ಬಗೆಬಗೆಯಾದ ಉತ್ತರಗಳೂ ರಾಯನಿಗೆ ಅಸಮ್ಮತ. ಮೊದಲ ಪ್ರಶ್ನೆಗೆ ಪಂಡಿತನಿಚಯ ಅನುತ್ತೀರ್ಣ.

ರಾಯ ಎರಡನೆಯ ಪ್ರಶ್ನೆಯನ್ನು ಕೇಳಿದನು ‘ ಸತ್ತರೆ ಬದುಕುವವನಾರು ? ’

ಪ್ರಾಜ್ಞತಮ ಪಂಡಿತ ಹುಬ್ಬುಗಂಟಿಕ್ಕುತ್ತ ಎದ್ದು ನಿಂತ. ‘ ಪ್ರಭು. ಈ ಪ್ರಶ್ನೆಯೇ ಅಸಂಬದ್ಧ. ಸಾಯಲಿರುವವನಿಗೆ ಔಷಧಿ ಹುಯಿದರೆ ಬದುಕಬಹುದು ; ಆದರೆ ಸತ್ತರೆ ಬದುಕುವುದುಂಟೆ ’ ಎಂದನು. ಇತರ ಕೆಲವು ಪಂಡಿತರೂ ತಮತಮಗೆ ತೋರಿದ ಉತ್ತರವಿತ್ತರು; ಕೆಲವರು ಯಾವ ಉತ್ತರವನ್ನೂ ಕೊಡದಾದರು. ಸಾಳುವ ತಿಮ್ಮ ಈ ಪ್ರಶ್ನೆಗಳಿಗೆ ಸಮಂಜಸ ಉತ್ತರವಿತ್ತರೆ ಅವನೇ ಮಂತ್ರಿಯಾಗಿರಬೇಕಾಗಿಯೂ, ತಾವು ಅವನ ದಾಸರಾಗಿರುವುದಾಗಿಯೂ ಒಪ್ಪಿದರು.

ಸಾಳುವ ತಿಮ್ಮ ಸಂಕೋಚದಿಂದೆಂಬಂತೆ ಮೆಲ್ಲನೆ ಎದ್ದು ನಿಂತ. ‘ ಇಂಥ ಮಹಾ ಮಹಾ ಪಂಡಿತೋತ್ತಮರು ಸಮಂಜಸ ಉತ್ತರ ಕೊಡದಾದಮೇಲೆ ನಾನೇನು ಕೊಡಬಲ್ಲೆ. ಆದರೂ ತೋಚಿದುದನ್ನು ಹೇಳಬೇಕಾದುದು ನನ್ನ

ಕರ್ತವ್ಯ. ಬದುಕಿದರೆ ಬದುಕುವನಾರು, ಎಂಬ ಪ್ರಶ್ನೆಗೆ ನನ್ನ ಉತ್ತರ: ಶ್ರೀಮಂತನಿಗೆ ವ್ಯಾಧಿ ಬಂದರೆ ವೈದ್ಯ ಔಷಧೋಪಚಾರ ಮಾಡುವನು; ಶ್ರೀಮಂತ ವ್ಯಾಧಿಯಿಂದ ಮರಣಹೊಂದದೆ ಬದುಕಿದರೆ ವೈದ್ಯನಿಗೆ ಹೇರಳವಾದ ಸಂಭಾವನೆ ಕೊಡುವನು. ಇದರಿಂದ ವೈದ್ಯನ ಜೀವನ ನಡೆದು, ಬದುಕುವನು. ಹೀಗೆ ಶ್ರೀಮಂತ ಬದುಕಿದರೆ ವೈದ್ಯ ಬದುಕುವನು '

ಸಾಳುವ ತಿಮ್ಮನ ಚತುರ ಉತ್ತರದಿಂದ ಸಭಿಕರು ಸಂತುಷ್ಟರಾದರು. ರಾಯ ತಲೆದೂಗಿದನು. ಸಾಳುವ ತಿಮ್ಮ ಎರಡನೆ ಪ್ರಶ್ನೆಗೆ ಉತ್ತರ ಕೊಡತೊಡಗಿದ: ' ಅಪರಕರ್ಮ ಮಾಡುವ ಪುರೋಹಿತ ಜನ ಸತ್ತಾಗ, ಕರ್ಮ ಮಾಡಿ ದಕ್ಷಿಣೆ ಪಡೆಯುತ್ತಾನೆ; ಇದರಿಂದಲೇ ಅವನು ಬದುಕುವುದು. ಹೀಗೆ, ಜನ ಸತ್ತರೆ ಅಪರಕರ್ಮಮಾಡುವವನು ಬದುಕುವನು'.

ಬಹು ಜಟಿಲವೆಂದು ಭಾವಿಸಿದ್ದ ಪ್ರಶ್ನೆಗಳಿಗೆ ಸಮಂಜಸ ಉತ್ತರ ಇಷ್ಟು ಸುಲಭವಾಗಿದ್ದುದು ಪಂಡಿತರ ತಲೆ ತಗ್ಗಿಸುವಂತೆ ಮಾಡಿತು. ಮಂತ್ರಿಯ ಚಾತುರ್ಯದಿಂದ ರಾಯನಿಗೆ ಹೆಮ್ಮೆ. ರಾಯನ ಇತರ ಪ್ರಶ್ನೆಗಳಿಗೂ ಪಂಡಿತರ ಉತ್ತರ ಅಸಮರ್ಪಕ; ಸಾಳುವ ತಿಮ್ಮನ ಉತ್ತರ ಸಮಂಜಸ. ಅಂದಿನಿಂದ ಪಂಡಿತಗಣದ ಅಟ್ಟಹಾಸ ಅಡಗಿತು.





# ಬೆಂಕಿಗೆ ತುಪ್ಪ

ನೀರವ ವ್ಯೋಮದಲ್ಲಿ ಶುಕ್ರ ಮಂದಗಮನದಿಂದ ಮೂಡಿದನು. ವಿಜಯನಗರದ ಸಮಗ್ರ ಸೌಭಾಗ್ಯವನ್ನು ನಿರಾತಂಕವಾಗಿ ನೋಡುವ ಸದವಕಾಶದ ಲಾಭಪಡೆಯುವವನಂತೆ ಶುಕ್ರ ಅನಿಮಿಷನಾಗಿ ಈಕ್ಷಿಸಿದನು ; ಅವನ ಕಣ್ಗಳು ಹಿರಿವಜ್ರದಂತೆ ನಿಗಿನಿಗಿ ಬೆಳಗಿದವು. ಶುಕ್ರನ ಹೆಮ್ಮೆಯನ್ನು ಸಹಿಸಲಾರೆನೆಂಬಂತೆ ಕೃಷ್ಣದೇವರಾಯನೂ ತನ್ನ ತೇಜಃಪುಂಜ ನೇತ್ರದ್ವಯವನ್ನು ತೆರೆದನು. ನಿದ್ರಾಮುದ್ರಿತಳಾಗಿ ಶಯ್ಯೆಯಲ್ಲಿ ತನ್ನ ಕೆಲದಲ್ಲಿ ಪವಡಿಸಿದ್ದ ರಾಣಿ

ತಿರುಮಲಾದೇವಿಯ ಮೊಗ ಮುಂಜಾವಿನ ಅರೆಬೆಳಕಿನಲ್ಲೂ ಸ್ನಿಗ್ಧ ಸುಂದರವಾಗಿ ಮುಗ್ಧಮನೋಹರವಾಗಿ ಕಂಗೊಳಿಸಿತು. ರಾಯ ಪ್ರೇಮಪೂರ್ಣವಾಗಿ ವಿಲಸಿತನಾಗಿ ಮಂದಸ್ಮಿತನಾದನು. ಅರಸನ ಎಚ್ಚರದ ವೇಳೆಯರಿತು ಕೆಲದ ಕೊಠಡಿಯಲ್ಲಿ ಬಾಜಿಸಿದ ವೀಣಾವಿತಾನದ ಮಂಜುಳ ನಿನಾದ ರಾಯನ ನಿದ್ರೆಯನ್ನು ಪೂರ್ಣ ನಿವಾರಿಸಿತು. ರಾಣಿಗೆ ನಿದ್ದೆಯಾರದಂತೆ ಮೆಲ್ಲನೆ ರಾಯ ಮಂಚದಿಂದ ಕೆಳಸರಿದು ನಿಂತನು. ವ್ಯೋಮಪಟದಲ್ಲಿ ಮೇಲಿಮೇಲೇರುತ್ತಿದ್ದ ತೇಜಃಪುಂಜ ಶುಕ್ರನ ದರ್ಶನ ವಾತಾಯನದ ಮೂಲಕ ಉಂಟಾಗಿ, ವಿಜಯಸಾಮ್ರಾಜ್ಯಾಂಬರದಲ್ಲಿ ತಾನೂ ಅಂತೇ ವಿರಾಜಮಾನನಾಗಿದ್ದುದು ನೆನವಾಗಿ, ರಾಯ ಹೆಮ್ಮೆಯಿಂದ ಸಂತೃಪ್ತಿಯಿಂದ ಬೀಗಿದನು. ವೀಣಾವಿತಾನ ಸ್ತಬ್ಧವಾಗಿ, ಉಷಃಕಾಲದ ಮಂಗಳ ತೂರ್ಯಧ್ವನಿ ಮೊಳಗಿದಾಗ ರಾಯ ಪ್ರಾತರ್ವಿಧಿಗಳನ್ನು ಮುಗಿಸಿ, ಪದ್ಧತಿಯಂತೆ ವ್ಯಾಯಾಮಕ್ಕಾಗಿ ಮಲ್ಲಶಾಲೆಯನ್ನು ಪ್ರವೇಶಿಸಿದನು.

ವಸನಗಳನ್ನು ಕಳಚಿ, ಲಂಗೋಟಿಯನ್ನು ಬಿಗಿದುಟ್ಟನು. ಸುವರ್ಣ ಪಾತ್ರದಲ್ಲಿ ನೀಡಲ್ಪಟ್ಟ ಮೂರು ಪಾವು ಒಳ್ಳೆಣ್ಣೆಯನ್ನು ಗಟಕ್ಕನೆ ಗುಟುಕರಿಸಿದನು. ಇಬ್ಬರು ಮಲ್ಲರು ರಾಯನ ಮೈಗೆಲ್ಲ ಎಣ್ಣೆಪೂಸಿದರು. ರಾಯನೀಗ ವ್ಯಾಯಾಮ ಸನ್ನದ್ಧ. ಭುಜದ್ವಯಕ್ಕೂ ಭಾರಗಳನ್ನು ಪೇರಿಸಿಕೊಂಡು ಅಂಗಸಾಧನೆ ಮಾಡಿದನು. ನಂತರ ಭಾರದ ನೀಳ್ಗತ್ತಿಗಳೆರಡನ್ನು ಎರಡು ಕೈಗಳಲ್ಲೂ ಹಿಡಿದು, ಕತ್ತಿವರಸೆಯಲ್ಲಿ ತೊಡಗಿದನು. ಸುತ್ತ ನಾಲ್ವರು ನಿಂತು ಕಲ್ಲುಗಳನ್ನು ಎಡೆಬಿಡದೆ ಬೀರಿದರೂ ಒಂದು ಕಲ್ಲೂ ತನ್ನ ಮೈಗೆ ತಾಗದಂತೆ ನಿವಾರಿಸುವಷ್ಟು ವೇಗವಾಗಿ ಬೀಸುತ್ತಿದ್ದ ಕತ್ತಿವರಸೆ. ಕತ್ತಿಗಳು ಗಿರಗಿರನೆ ಗಾಳಿಯಲ್ಲಿ ತಿರುಗುತ್ತಿದ್ದವು. ಮೈಗೆ ಪೂಸಿದ್ದ, ಹಾಗು ಗುಟುಕರಿಸಿದ್ದ ಎಣ್ಣೆಯೆಲ್ಲ ಬೆವರ ಮೂಲಕ ಮೈಯ ಹೊರಗೆ ಕಾರಿತು.

ಕೆಮ್ಮಣ್ಣಿ ಮಟ್ಟೆಯಲ್ಲಿ ಸಿದ್ಧರಾಗಿ ನಿಂತಿದ್ದ ಮಲ್ಲರಿಬ್ಬರ ದೆಸೆಗೆ ರಾಯ ನುಗ್ಗಿದನು. ವರಸೆಗಳ ಚಮತ್ಕಾರದ

ಪರಂಪರೆ ಗೋಚರ. ರಾಯನ ಸಿಂಹಬಲದೆದುರು ಮಲ್ಲರಿಬ್ಬರೂ ಹಣ್ಣಾಗಲು ರಾಯ ಗರ್ಜಿಸುತ್ತ ನೆಲಕ್ಕೆ ಎಗರಿದನು. ಬೆವರು, ಎಣ್ಣೆ, ಮಟ್ಟಿಗಳಿಂದ ಮಲಿನವಾದ ಅರಸನ ದೇಹವನ್ನು ಭೃತ್ಯರಿಬ್ಬರು ವಸ್ತ್ರದಿಂದ ತೊಡೆದು ನಿರ್ಮಲಗೊಳಿಸಿದರು.

ಮಲ್ಲಶಾಲೆಯಿಂದ ರಾಯ ಹೊರವಂದು ಬಯಲಿಗೆ ಕಾಲಿಟ್ಟಾಗ, ಆನೆಯಂತೆ ಬಲಿಷ್ಠವಾದ ಓರ್ಮುಜ್ ತಾಕಣ ಸವಾರಿಗೆ ಸಜ್ಜಾಗಿ ನಿಂತಿತ್ತು. ಇಷ್ಟೊಂದು ವ್ಯಾಯಾಮವನ್ನಾಗಲೆ ಮುಗಿಸಿದ್ದರೂ ರಾಯ ಹುಲಿಯಂತೆ ಒಂದೇ ಹಾರಿಗೆ ತಾಕಣದ ಮೇಲೆ ಕುಪ್ಪಳಿಸಿ ಕುಳಿತನು. ವಿಶಾಲವಾದ ಬಯಲಿನಲ್ಲಿ ತಾಕಣವನ್ನು ಅತ್ತಿಂದಿತ್ತ ದಿಕ್ಕುಗೆಡುವಂತೆ ಓಡಿಸಿದನು. ಎಂದಿಗಿಂತಲೂ ಅಧಿಕವಾಗಿ ಮೈಗೆಲ್ಲ ಬಿದ್ದ ಚಾಟಿಏಟಿನಿಂದ ಕುದುರೆ ಚಮಕಿತವಾಗಿ, ಬೆಚ್ಚಿ, ಕಕ್ಕಾವಿಕ್ಕಿಯಾಗಿ ಹಿಗ್ಗುಮುಗ್ಗಾಗಿ ಓಡಿತು.

ಧಢ್! ಧಢ್‌ಢ್! ಢಢ್!

ಕುದುರೆ ಮುಗ್ಗರಿಸಿತು; ನೆಲಕ್ಕೆ ಉರುಳಿತು; ರಾಯ ವ್ಯಾಘ್ರನಂತೆ ಕುಪ್ಪಳಿಸಿ, ಸಸಿಹದ ನೆಲದ ಮೇಲೆ ನಿಂತು, ಅಪಾಯದಿಂದ ಪಾರಾಗಿದ್ದನು. ಮುಗ್ಗರಿಸಿದ ತಾಕಣದ ಮೇಲೆ ಉಗ್ರ ಕೋಪ ಮೂಡಿತ್ತು. ಕೈಲಿದ್ದ ಕಶೆಯಿಂದ ಎಡೆಬಿಡದೆ ಅಶ್ವವನ್ನು ಪ್ರಹರಿಸಿದನು. ಕಶೆ ಹರಿಹರಿದು ಹೋದಮೇಲೆ ರಾಯ ತುಸು ಶಾಂತ. ಆದರೂ ಎಂದಿಲ್ಲದ ದುಗುಡ, ಮನೋವೈಕಲ್ಯ ಅವನನ್ನು ಆವರಿಸಿತ್ತು.

ಸ್ನಾನಗೃಹಕ್ಕೆ ಸಾಗಿದನು. ಪುಷ್ಪಪರಿಮಳದಿಂದ ಕಂಪುವೆತ್ತ ಶೀತಲ ಜಲ ಸಿದ್ಧವಾಗಿತ್ತು. ಹಾರುವನೊಬ್ಬ ರಾಯನ ಮೈ ತಿಕ್ಕಿ ತೊಳೆದನು. ಶುಚಿರ್ಭೂತನಾದ ಅರಸ ರೇಸಿಮೆಯ ಮಡಿಯುಟ್ಟು, ಭುವನವಿಜಯದ ಆವರಣದಲ್ಲಿದ್ದ ದೇವಾಲಯಕ್ಕೆ ನಡೆದು ಪ್ರಾರ್ಥನಾವಿಧಿಯನ್ನು ಸಲಿಸಿದನು. ಆದರೂ ಮನೋಶಾಂತತೆಯಿಲ್ಲ; ಚಿತ್ತೈಕಾಗ್ರತೆ

ಯಿಲ್ಲ. ದೇವರಲ್ಲಿ ಅನನ್ಯ ಭಕ್ತಿಯಿಂದ ಪ್ರಾರ್ಥನೆ ಸಲ್ಲಿಸುವುದಾಗಲಿಲ್ಲ. ನಿಷ್ಕಾರಣವಾದ ಚಿತ್ತಸ್ಖಲನದಿಂದ ರಾಯ ಬೇಸರಗೊಂಡನು.

ತಳಮಳಗೊಳ್ಳುತ್ತಿದ್ದ ಮನಸ್ಸಿನಲ್ಲಿಯೇ ಭುವನವಿಜಯಕ್ಕೆ ನಿರ್ಗಮಿಸಿದನು. ಆಮೋದಾರ್ಥವಾಗಿ ವೇಣುವಾದನ ಮಾಡತೊಡಗಿದನು. ಇಂದು ನಾದದಲ್ಲಿ ಎಂದಿನ ಇಂಪಿಲ್ಲ; ಆರೋಹಣ ಅವರೋಹಣಗಳಲ್ಲಿ •ವೇಗವಿಲ್ಲ; ಕೊಳಲನ್ನು ಎತ್ತಿ ನೆಲಕ್ಕೆಸೆದನು. ಚಿನ್ನದ ಉಂಗುರಗಳನ್ನು ತೊಡಿಸಿದ್ದರೂ ಬಿದಿರ ಕೊಳಲು; ಲಟಕ್ಕನೆ ಮುರಿದು ತುಂಡಾಗಿ ಅರ್ಥವಿಹೀನವಾಗಿ ಬಿದ್ದಿತು.

'ಪ್ರಭು!'

ರಾಯ ಕಟ್ಟೆಗೆಯವನ ಕಡೆ ತಟಕ್ಕನೆ ತಿರುಗಿದನು.

'ಸಿದ್ದಿ ಮರ್ಕಾರ ಗೋವೆಯಿಂದ ವಿಜಯನಗರಕ್ಕೆ ಹಿಂದಿರುಗದೆ ಮಾಯವಾಗಿದಾನೆ.'

'ಏನು?' ರಾಯನ ಕಂಚಿನ ಕಂಠ ಮೊಳಗಿತು.

'ವಿಜಯನಗರದ ವಿಶ್ವಾಸದ ಆಶ್ರಯದಲ್ಲಿದ್ದು ಆದಿಲ್‌ಷಹನ ಆಸರೆಗೆ ಹೋಗಿದ್ದವನು ಷಹನಿಂದ ಧನದಾಸೆಗಾಗಿ ನಿಹತನಾಗಿದಾನೆ.'

ರಾಯನ ಕಣ್ಣು ಕೆಂಪೇರಿದವು. ಎದ್ದು ನಿಂತವನು ರೋಷದಿಂದ ಹೆಜ್ಜೆಯನ್ನು ಅಪ್ಪಳಿಸಿದನು. ಮುರಿದು ಬಿದ್ದಿದ್ದ ಕೊಳಲು ಅವನ ಹೆಜ್ಜೆಯೇಟಿಗೆ ಲಟಲಟನೆಂದು ಶತಚ್ಛಿನ್ನವಾಯ್ತು. ಆಮೋದ ವಿಲಾಸಗಳಲ್ಲಿ ತಲ್ಲೀನವಾದ ವಿಜಾಪುರ ರಾಜ್ಯ ಈ ವೇಣುವಿನಂತೆಯೆ ತನ್ನ ಪದಹತಿಗೆ ಸಿಲುಕಿ ಉಧ್ವಸ್ತವಾಗುವುದೆಂದುಕೊಂಡನು. ಮುಂದಿನ ಕಾರ್ಯ ನಿಶ್ಚಯಕ್ಕಾಗಿ ರಾಜಸಭೆಗೆ ಕರೆಕೊಟ್ಟನು.

ಪಾರಸೀಸ್ಥಾನದಿಂದ ಗೋವೆಯ ಬಂದರಿಗೆ ಆಮದಾದ ಕುದುರೆಗಳನ್ನು ವಿಜಯನಗರಕ್ಕೆ ಸಾಗಿಸುವ ಕೆಲಸವನ್ನು ಕೈಕೊಂಡಿದ್ದ ಸಿದ್ದಿ ಮರ್ಕಾರ ಕೃಷ್ಣದೇವರಾಯನ ನಂಬುಗೆ ವಿಶ್ವಾಸಗಳನ್ನು ಗಳಿಸಿಕೊಂಡಿದ್ದನು. ಈ ಬಾರಿ ಬೊಕ್ಕಸದಿಂದ ನಲವತ್ತು ಸಹಸ್ರ ವರಹಗಳನ್ನಿತ್ತು ಸಿದ್ದಿ ಮರ್ಕಾರನನ್ನು ಕುದುರೆಗಳ ತರುವಿಕೆಗಾಗಿ ಕಳಿಸಲಾಗಿತ್ತು. ಸಿದ್ದಿ ಗೋವೆಗೆ ಸಮೀಪಗತನಾದಾಗ ವಿಜಾಪುರದ ಆದಿಲ್‌ಷಹನ ಆಹ್ವಾನ ಅಲ್ಲಿ ಸಿದ್ಧ. ಸಿದ್ದಿ ನ್ಯಾಯಶಾಸ್ತ್ರಪರಿಣತನೂ, ಹಜರತ್ ಮಹಮದನಿಗೆ ಸಂಬಂಧಿಯೂ ಆದುದರಿಂದ ಆತ ತನಗೆ ನಿಕಟವರ್ತಿಯಾಗಿರಬೇಕೆಂಬ ಆಶಯವನ್ನು ಆದಿಲ್‌ಷಹ ಸೂಚಿಸಿದ್ದ. ದಾಬುಲ್‌ದುರ್ಗದ ಆಧಿಪತ್ಯವನ್ನು ಸಿದ್ದಿಗೆ ಕೊಡಲಾಯ್ತು.

ತನ್ನ ಪ್ರಜೆಯನ್ನು ವಿಜಯನಗರಕ್ಕೇ ಹಿಂದಿರುಗಿ ಕಳುಹಬೇಕೆಂದು ಷಹನಿಗೆ ರಾಯನ ಆದೇಶ. ಸಿದ್ದಿ ಮರ್ಕಾರನೆಂಬುವನನ್ನೆ ತಾ ಕಾಣೆನೆಂದು ಆದಿಲ್‌ಷಹನ ಮಾರೋಲೆ. ತಮ್ಮ ನಾಡವನನ್ನು ತಮಗೆ ಹಿಂದಿರುಗಿಸದಿದ್ದರೆ ಯುದ್ಧಪ್ರಾಪ್ತಿಯೆಂಬುದು ರಾಯನ ಸೂಚನೆ. ಪ್ರಬಲ ಪ್ರತಾಪಿ ಕೃಷ್ಣದೇವರಾಯ ಮೇಲೆ ಬಿದ್ದರೆ ತಾ ಹುಡಿಹುಡಿಯಾಪೇನೆಂಬುದು ಸಿದ್ದಿಗೆ ಅರಿವು; ದಾಬುಲ್‌ನಿಂದ ಓಟಕಿತ್ತನು. ಸಿದ್ದಿ ತನ್ನ ಕೈಬಿಟ್ಟು ಹೋಗುವುದಾದಮೇಲೆ ಆದಿಲ್‌ಷಹನ ಪಾಲಿಗೆ ಅವನು ಬದುಕಿದ್ದರೆಷ್ಟು, ಸತ್ತರೆಷ್ಟು. ಅವನಲ್ಲಿದ್ದ ವಿಜಯನಗರದ ಹಣವನ್ನಾದರೂ ವಶಪಡಿಸಿಕೊಳ್ಳೋಣ. ಚಾರರು ಪಯಣಹೊರಟಿದ್ದ ಸಿದ್ದಿಯನ್ನು ಸಮರಾತ್ರಿಯಲ್ಲಿ ಕೊಂದು, ಅವನಲ್ಲಿದ್ದ



ಆಧೌ ಕರ್ನಾಟಕ ದೇವಿ

ನಲವತ್ತು ಸಹಸ್ರ ವರಹಗಳನ್ನು ಷಹನಿಗೆ ಒಪ್ಪಿಸಿದ್ದರು. ರಾಂತಿಯ ಒಪ್ಪಂದವನ್ನು ಮುರಿದು, ತನ್ನ ಪ್ರಜೆಯನ್ನು ಸಿಹತಮಾಡಿದ್ದ ಆದಿಲ್‌ಷಹನ ಮೇಲೆ ರಾಯನಿಗೆ ಅತಿ ಕೋಪ ; ವಿಜಯನಗರದ ಆಸ್ಥಾನಿಕರಲ್ಲೆಲ್ಲ ಗುಜುಗುಜು.



ಆಸ್ಥಾನ. ಸ್ತಂಭಗಳೆಲ್ಲ ಬುಡದಿಂದ ತುದಿವರೆಗೆ ವರ್ಣವರ್ಣದ ವಸನಗಳಿಂದ ಆವೃತವಾಗಿ ಅಲಂಕೃತ. ಗೋಡೆಗಳು ಕಲಾಕೃತಿಗಳಿಂದ ಚಿತ್ರಿತ. ಕೆಲದ ಎರಡು ಗೋಡೆಗಳ ಮೇಲೂ ಎದುರು ಬದುರಾಗಿ ಅಪೂರ್ವ ರೂಪಸಿಯರೀರ್ವರು ನರ್ತನದ ಭಂಗಿಯಲ್ಲಿರುವ ಚಿತ್ರ. ಮಂದಿರದ ನಡುವಿನಲ್ಲಿ ಉನ್ನತವಾದ ಗದ್ದುಗೆಯ ಮೇಲೆ ಸ್ವರ್ಣ ಸಿಂಹಾಸನ; ಗದ್ದುಗೆಯಿಂದ ಇಳಿದ ಕೂಡಲೆ ಬಲಗಡೆ ಮೊದಲ ಪೀಠದಲ್ಲಿ ಮಂತ್ರಿ ಸಾಳುವ ತಿಮ್ಮ; ಕೆಳಗಣ ಪೀಠಗಳಲ್ಲಿ ಹಲವು ಪ್ರಾಂತಾಧಿಕಾರಿಗಳು, ದಳಪತಿಗಳು ಉಚಿತಾಸನಗಳಲ್ಲಿ ಮಂಡಿಸಿದ್ದಾರೆ. ಉಪದಳಪತಿಗಳು ಕೆಲದ ಗೋಡೆಗಳನ್ನೊರಗಿ ನಿಂತಿದಾರೆ. ಸಿದ್ದಿ ಮರ್ಕಾರನ ಕೊಲೆ, ಅರಸನಿಗೆ ಉಂಟಾದ ಉಗ್ರ ಕೋಪ ಇವೇ ಎಲ್ಲರ ಬಾಯ್‌ಮಾತು. ಭಟ್ಟಂಗಿಗಳ ಮೊದಲ ಧ್ವನಿ ಕಿವಿಗೆ ಬಿದ್ದೊಡನೆಯೇ ಆಸ್ಥಾನಿಕರೆಲ್ಲ ಸ್ತಬ್ಧರಾದರು ; ಉಪಸ್ಥಿತರೆಲ್ಲ ಉತ್ತಿಷ್ಠರಾದರು.

ಸ್ವಸ್ತಿ ಶ್ರೀ
ಭುವನಾಧೀಶ್ವರ

ಸಮಸ್ತ ರಾಜಾಧಿರಾಜ ರಾಜಪರಮೇಶ್ವರ
ಶ್ರೀಮನ್ ಮಹಾ ಮೇದಿನೀ ಮೀಸರ ಗಂಡ
ಶ್ರೀಮದ್ದಕ್ಷಿಣ ಸಮುದ್ರಾಧಿಪತಿ
ನರಸಿಂಹವರ್ಮ ಮಹಾರಾಜ ತನೂಭವ
ವೀರ ಭುಜಬಲ ಪ್ರತಾಪ
ಸಕಲ ಭೂಮೀಶ್ವರ ನಿಕರ ಮಕುಟ ವಿನ್ಯಸ್ತ ಚರಣಾರವಿಂದ ಯುಗಳ
ಸರ್ವ ಭುವನ ಪ್ರಚಾರ
ಕುತೂಹಲಿತ ಕೀರ್ತಿ ಕುಲದೇವತಾ ಸಹಚಾರ ಚಾತುರ್ದಂತ ಬಲಾನ್ವಿತ
ವೀರಲಕ್ಷ್ಮೀ ಸಮಾಕರ್ಷಣ
ಉರುಕವಿ ವೈಭವ ನಿವಹ ನಿದಾನ
ಗಜಪತಿ ಸಪ್ತಾಂಗಹರಣ
ಕೃಷ್ಣದೇವ ಮಹಾರಾಯ

ವಂದಿಮಾಗಧರ ಹೊಗಳುಧ್ವನಿ ಮೊಳಗುತ್ತಿರುವಾಗಲೆ ರಾಯ ಸಭಾ ಮಂದಿರದೊಳಗೆ ಆಗಮಿಸಿದನು. ರಾಯನದು ದೃಢವಾದ ಮೈಕಟ್ಟು ; ಅಗಲವಾದ ತುಂಬು ಮೊಗ ; ತೇಜೋಮಯವಾದ ನೇತ್ರಗಳು ; ಮನೋಹರ ಪೀತ ದೇಹವರ್ಣ. ವೀರಗಚ್ಚೆಯುಟ್ಟು ಬಿಳಿರೇಸಿಮೆಯ ಕಸೆಯಂಗಿ ತೊಟ್ಟಿದ್ದನು ; ಅಂಗಿಯಮೇಲೆ ಜರತಾರಿ ಹೂವುಗಳ ಕುಸುರಿ ಕೆಲಸ. ಅಮೂಲ್ಯ ವಜ್ರಗಳ ಕುಂದಣವಿಟ್ಟ ತೊಡವು ಕೊರಳನ್ನು ಶೋಭಿಸಿತ್ತು. ಶಿರಸ್ತ್ರಾಣದಂತೆ

ತೋರುತ್ತಿದ್ದ ಕಿನ್‌ಕಾಪಿನ ಟೊಪ್ಪಿಗೆ ತಲೆಗೆ; ಟೊಪ್ಪಿಗೆಯ ಸುತ್ತ ನವುರು ರೇಸಿಮೆಬಟ್ಟೆ ಆಚ್ಛಾದಿತ. ರಾಯನ ಗಂಭೀರ ಮೂರ್ತಿ ಗಜಗಮನದಿಂದ ಮಂದಿರದೊಳಗೆ ಆಗಮಿಸಿದಾಗ ಆಸ್ಥಾನಿಕರು ತೋಳ್ಗಗಳನ್ನು ಸೀಳವಾಗಿ ಮೇಲೆತ್ತಿ, ತಲೆಯಮೇಲೆ ಕೈಜೋಡಿಸಿ ಪ್ರಣಮಿಸಿದ್ದರು. ರಾಯ ಸಿಂಹಾಸನದಲ್ಲಿ ಆರೂಢನಾಗುವ ಸಮಯಕ್ಕೆ ಸರಿಯಾಗಿ ಭಟ್ಟಂಗಿಗಳ ದನಿ ಸ್ತಬ್ಧವಾಯ್ತು.

ಸಿದ್ದಿ ಮರ್ಕಾರನೆಂಬುವನ ವಿಷಯವನ್ನೇ ತಾನು ತಿಳಿಯಿಸೆಂದು ಆದಿಲ್‌ಷಹ ರಾಯನಿಗೆ ಬರೆದ ಓಲೆ ರಾಯನ ನಿರ್ದೇಶದಂತೆ ಸಭೆಯಲ್ಲಿ ಓದಲ್ಪಟ್ಟಿತು. ಆಸ್ಥಾನಿಕರೆಲ್ಲ ಶಾಂತ; ಆದರೆ ಅರಸನ ಮೊಗ ಉಗ್ರ ಕ್ರೋಧದಿಂದ ಕೆಂಪೇರಿತು; ಹುಬ್ಬು ಗಂಟಿಕ್ಕಿದವು; ಎಂದನು—

'ನಮ್ಮ ಪ್ರಜೆಯೊಬ್ಬನನ್ನು ಪರರಾಜ ಶಾಂತಿಯ ಕಾಲದಲ್ಲಿ ನಿಷ್ಕಾರಣವಾಗಿ ಕೊಂದುದು ನಮ್ಮ ಸಿಂಹಾಸನಕ್ಕೇ ಅಪಮಾನ; ಸಾಲದುದಕ್ಕೆ ನಮ್ಮ ಬೊಕ್ಕಸದ ಧನಾಪಹರಣ. ಯಾವ ಸಂಧಾನಕ್ಕೂ ಎಡೆಗೊಡದೆ, ಕರ್ಣಾಟಕ ಸಿಂಹಾಸನಕ್ಕೆ ಅಪಮಾನವೆಸಗಿದ ಆದಿಲ್‌ಷಹನನ್ನು ಸಮರಾಂಗಣದಲ್ಲಿ ಬೊಗ್ಗುಬಡಿಯುವುದೊಂದೇ ಮಾರ್ಗ'

ಅರಸನ ಅನಿರೀಕ್ಷಿತ ಅಭಿಪ್ರಾಯದಿಂದ ಪ್ರಾಂತಾಧಿಕಾರಿಗಳು, ಸೇನಾಧಿಕಾರಿಗಳು ಬೆರಗಾದರು, ಬೆಚ್ಚಿದರು. ಅರಸನ ದುಡುಕಿಗಾಗಿ ನೀರವವಾಗಿ ಚಿಂತಿಸಿದರು. ಎಳ್ಳು ಸಿಡಿದರೂ ಕೇಳುವಷ್ಟು ಮೌನ ಸಭಾಮಂದಿರದಲ್ಲಿ ಪಸರಿಸಿತು.

ಸಾಳುವ ತಿಮ್ಮ ಮೆಲ್ಲನೆ ಎದ್ದುನಿಂತನು. ಅರಸನ ಮಾತಿಗೆ ವಿರುದ್ಧವಾಗಿ ನುಡಿಯುವ ಎಂಟೆದೆ ಆಸ್ಥಾನಿಕರಲ್ಲಿ ಇನ್ನಾರಿಗೆ! 'ಪ್ರಭು. ಸಾಮ್ರಾಜ್ಯದ ಅಧಿಕಾರಿಗಳು, ಸೇನಾನಿಗಳು, ದಂಡಾಳುಗಳು ಕರ್ಣಾಟಕದ ಹಿರಿಮೆಗಾಗಿ, ಶ್ರೇಯಸ್ಸಿಗಾಗಿ ರಣರಂಗದಲ್ಲಿ ಅಸುನೀಗಲು ಸದಾಸಿದ್ಧರಾಗಿದಾರೆ. ಆದರೆ ಕ್ಷುದ್ರ ಪ್ರಜೆಯೊಬ್ಬನ ಹತ್ಯೆಗಾಗಿ ಪ್ರಬಲ ರಾಷ್ಟ್ರಗಳೆರಡು ಭೀಕರ ಸಂಗ್ರಾಮದಲ್ಲಿ ಉದ್ಯುಕ್ತವಾಗುವುದೆ! ಯಕಶ್ಚಿತ ವ್ಯಾಪಾರಿಯೊಬ್ಬನ ಮರಣ ದಶಸಹಸ್ರಾಂತರ ಕಟ್ಟಾಳುಗಳ

ಸಾವುನೋವುಗಳಿಗೆ ಕಾರಣವಾಗಬೇಕೆ! ಬೊಕ್ಕಸದಿಂದ ಜಾರಿಹೋದ ಅಲ್ಪ ದ್ರವ್ಯಕ್ಕಾಗಿ ರಾಶಿಗಟ್ಟಲೆ ಹೊನ್ನು ಯುದ್ಧೋದ್ಯಮದಲ್ಲಿ ವ್ಯರ್ಥವಾಗಬೇಕೆ!' ಅರಸನ ಮೊಗದ ಚಿಕ್ಕ ಮಾಂಸಖಂಡವೂ ಕದಲಲಿಲ್ಲ. ಮಂತ್ರಿಯ ಮಾತೇ ಕೇಳದವನಂತೆ, ತಾ ಮೊದಲಾಡಿದ ಮಾತುಗಳನ್ನು ಮುಂದುವರಿಸುತ್ತಿರುವವನಂತೆ ಎಂದನು :

'ಸಾಮ್ರಾಜ್ಯದ ಘನತೆಯ ಪ್ರಶ್ನೆ ಎದ್ದಿರುವಾಗ ಧನವ್ಯಯದ ಉತ್ತರವೆಲ್ಲಿ! ಸಾರ್ವಭೌಮತ್ವದ ಮಾನ ಕಡೆಗಣಿಸಲ್ಪಟ್ಟಿರುವಾಗ ಸಾಮಾನ್ಯ ಸೈನಿಕರ ಪ್ರಾಣದ ಎಣಿಕೆಯೆಲ್ಲಿ! ಕರ್ಣಾಟಕ ಸಾಮ್ರಾಜ್ಯಕ್ಕೆ, ಸಾರ್ವಭೌಮತ್ವಕ್ಕೆ, ಜನತೆಗೆ ಅಪಮಾನವೆಸಗಿದ ಆದಿಲ್‌ಷಹನ ಮೇಲೆ ಪ್ರತೀಕಾರವೆಸಗುವುದು ನನ್ನ ಅಚಲ ನಿರ್ಧಾರ. ನನ್ನ ಪ್ರಜೆಯನ್ನು ನನ್ನ ಮೇಲೇ ತಿರುಗಿಸಿ, ದಾಬುಲ್‌ನಲ್ಲಿ ಆಶ್ರಯವಿತ್ತು, ಕೊನೆಗೆ ದಾಬುಲ್‌ನಲ್ಲೇ ಕೊಲೆಗೀಡುಮಾಡಿದುದರಿಂದ ದಾಬುಲ್ ದುರ್ಗವನ್ನೇ ನೆಲಸಮಮಾಡಿಬಿಡಬೇಕು. ಸಾಮ್ರಾಜದ ಸಮಗ್ರ ಸೈನ್ಯವೂ ಈಗಲೇ ಯುದ್ಧಸನ್ನದ್ಧವಾಗಲಿ.'

ತುಸು ತಡೆದು ಸಾಳುವ ತಿಮ್ಮ ಎಂದನು 'ಸಾಮ್ರಾಜ್ಯದ ಸಮಗ್ರ ಸೈನ್ಯವೂ ಈಗಲೇ ಯುದ್ಧಸನ್ನದ್ಧವಾಗಲಿ; ಆದರೆ ದಾಳಿ ದಾಬುಲ್‌ದುರ್ಗದ ಮೇಲೆ ಬೇಡ, ರಾಯಚೂರ ಮೇಲೆ. ಮೊದಲು ರಾಯಚೂರು ವಿಜಯಸಾಮ್ರಾಜ್ಯದ ಅಧೀನದಲ್ಲೇ ಇದ್ದುದು ಪರಾಕ್ರಾಂತವಾಗಿದೆ, ಅದನ್ನು ಪುನರ್ವಶಗೊಳಿಸಿಕೊಳ್ಳುವುದು ನಮ್ಮ ಕರ್ತವ್ಯ. ರಾಯಚೂರು ಸಂರಕ್ಷಣೆಗಾಗಿ ಆದಿಲ್‌ಷಹ ದಂಡೆತ್ತಿ ಬರುವುದೇನೋ ನಿಶ್ಚಿತ ; ಆಗ ಅವನಿಗೆ ತಕ್ಕ ಪ್ರತೀಕಾರವೆಸಗೋಣ'

'ಆದಿಲ್‌ಷಹನ ಅಪರಾಧಕ್ಕೆ ಶಿಕ್ಷೆ ನೀಡುವುದೇ ನನ್ನ ಗುರಿ. ಇಮ್ಮಡಿ ನರಸಿಂಹನ ಮೃತ್ಯುಪತ್ರದ ಆದೇಶದಂತೆ ರಾಯಚೂರ ವಿಜಯ ಇನ್ನೂ ಉಳಿದು ನಿಂತಿದೆ. ರಾಯಚೂರ ಮುತ್ತಿಗೆಯಿಂದ ಎರಡೂ ಉದ್ದೇಶ ಸಿದ್ಧಿಸಿದಂತಾಗುವುದು'.

ಅರಸನ ಮಾತಿಗೆ ಎಲ್ಲರೂ ಒಪ್ಪಿದರು. ಶೀಘ್ರವಾಗಿ ಸರ್ವ ಸನ್ನಾಹ ಮಾಡಲು ಸಾಮಂತರಿಗೂ ಪ್ರಾಂತಾಧಿಕಾರಿಗಳಿಗೂ ಆಣತಿ ನೀಡಲಾಯ್ತು.



## ರಾಯ್ಚೂರ ರಣಭೂಮಿ

ಕೃಷ್ಣೆಗೆ ಉತ್ತರದ ಐವರು ಸುಲ್ತಾನರಲ್ಲಿ ವಿಜಾಪುರದ ಆದಿಲ್‌ಷಹನೇ ಬಲಾಢ್ಯ ; ಇವನು ತಮ್ಮನ್ನು ಒಂದಲ್ಲ ಒಂದು ದಿನ ಹರಿದು ತಿನ್ನುವಷ್ಟು ಬಲಿಷ್ಠನಾದಾನೆಂದು ಇತರ ಸುಲ್ತಾನರಿಗೆ ಹೆದರಿಕೆ ; ಒಳಗೊಳಗೇ ಈರ್ಷೆಯಿಂದ ಪ್ರಜ್ವಲಿಸುತ್ತ, ದ್ವೇಷತಪ್ತರಾಗಿದ್ದರು. ಈ ಒಳಗುಟ್ಟನ್ನರಿತ ರಾಯ ಇತರ ಸುಲ್ತಾನರ ನೆರವು ಆದಿಲ್ ಷಹನಿಗೆ ಉಂಟಾಗದಂತೆ ಉಪಾಯ ಹೂಡಿದನು. ತಾನು ರಾಯ್ಚೂರಮೇಲೆ ದಾಳಿಸಿಲ್ಲುವುದಾಗಿ ಬಿದರೆ, ಬಿರಾರ, ಗೋಲ್ಕೊಂಡಗಳ ಸುಲ್ತಾನರಿಗೂ ನಿಜಾಂಷಹನಿಗೂ ಓಲೆ ಕಳುಹಿದನು. ರಾಯನ ಕೃತ್ಯ ಸಮಂಜಸವೆಂದೂ, ತಮಗೆ

ಸಾಧ್ಯವಾದಷ್ಟು ಬೆಂಬಲವನ್ನು ರಾಯನಿಗೆ ನೀಡುವುದಾಗಿಯೂ ಒಬ್ಬಿಬ್ಬರು ಸುಲ್ತಾನರಿಂದ ಮಾರೋಲೆ ಬಂತು. ಉಳಿದವರೂ ಆದಿಲ್‌ಷಹನಿಗೆ ಯಾವ ತೆರನಾದ ನೆರವು ನೀಡುವ ಗೋಜಿಗೂ ಹೋಗಲಿಲ್ಲ. ಈಗ ಆದಿಲ್‌ಷಹ ಏಕಾಕಿ.

ವಿಜಯಸಾಮ್ರಾಜ್ಯದ ಸಮುದ್ರಸದೃಶ ಮಹಾಸೇನೆ ಯುದ್ಧ ಸನ್ನದ್ಧವಾಯ್ತು; ರಾಯ ರಾಯ್ಚೂರಿಗೆ ಪಯಣವನ್ನು ನಿಶ್ಚಯಿಸಿದನು. ತುಂಗಭದ್ರೆಯ ತಟದ ದೇಗುಲದ ವಿರೂಪಾಕ್ಷನಿಗೆ ಪೂಜೆಪುರಸ್ಕಾರಗಳನ್ನು ಸಲ್ಲಿಸಿ, ಮುಂದುವರಿದನು. ಸೇನೆ ರಾಜಧಾನಿಯಿಂದ ಹೊರಟಾಗ ಮುಂಬೇಸಗೆ; ಹತ್ತಿಯ ಹೊಲಗಳ ಮೂಲಕ ಸೈನ್ಯ ರಾಯ್ಚೂರಿಗೆ ಹಾದು ಹೋಗಲು ಹಾದಿ ಹಸನಾಗಿತ್ತು. ಅಗಾಧವಾದ ವಿಜಯಸೈನ್ಯ ಭೂಮಂಡಲವೇ ನಡುಗುವಂತೆ ಹೆಜ್ಜೆಹಾಕುತ್ತ ಮುನ್ನಡೆಯಿತು.

ರಕ್ಷಣಾದಳದ ಅಧಿಪತಿ ಕಾಮನಾಯಕ ಬಿಲ್‌ಗಾರರು, ಈಟಿಗಾರರು, ಗುರಾಣಿಕಾರರು, ಆನೆ ಕುದುರೆಗಳು ಉಳ್ಳ ಮೂವತ್ತು ಸಹಸ್ರ ಪಡೆಗೊಂಡು ಸೇನಾಗ್ರದಲ್ಲಿ ಸಾಗಿದ್ದನು. ಅವನ ನಂತರ ಶಿವಸಮುದ್ರದ ತ್ರಿಯಂಬಕರಸ ಸ್ವಸೇನಾಸಮೇತ ನಡೆದಿದ್ದನು. ಸಾಳುವ ತಿಮ್ಮ, ರಾಯಸದ ಕೊಂಡಮರಸಯ್ಯ, ಸಾಳುವ ತಿಮ್ಮನ ತಮ್ಮ ಗೋವಿಂದರಾಯ ಮುಂತಾದವರೂ ದೊಡ್ಡ ದೊಡ್ಡ ದಳಗಳನ್ನು ನಡೆಸುತ್ತ ಮುನ್ನಡೆದಿದ್ದರು. ಆದಪ್ಪನಾಯಕ ಲಕ್ಷ ಕಾಲಾಳಿಗೂ, ಐದು ಸಾವಿರ ಕುದುರೆಗಳಿಗೂ ಅಧಿಪತಿಯಾಗಿ ಬೀಗುತ್ತ ಸಾಗಿದ್ದನು. ರಾಯನಿಗೆ ವೀಳೆಯದೆಲೆ ಕೊಡುವ ಸೇವಕನೇ ಹದಿನೈದು ಸಾವಿರ ಕಾಲಾಳು, ಇನ್ನೂರು ಕುದುರೆಗಳ ಸೈನ್ಯಕ್ಕೆ ಒಡೆಯ, ಎಂದ ಮೇಲೆ ವಿಜಯಸೈನ್ಯ ಇನ್ನೆಷ್ಟು ಅಗಾಧ! ಬಂಕಾಪುರದಧಿಪತಿ ಮುಂತಾದವರು ತಮ್ಮ ತಮ್ಮ ಪಡೆಗಳನ್ನೊಡಗೊಂಡು ಬೇರೆ ಬೇರೆ ಮಾರ್ಗಗಳಿಂದ ರಾಯ್ಚೂರ ರಣಭೂಮಿಗೆ ಪಯಣಿಸಿದ್ದರು. ಶಿಬಿರಸಹಾಯಕರಿಂದ ಸಹಿತವಾದ ವಿಜಯಸೈನ್ಯ ಹತ್ತು ಲಕ್ಷ ಜನದಿಂದ ಕೂಡಿತ್ತು.

ಹಾದಿಯಲ್ಲಿ ವಿಚಿತ್ರವೊಂದು ಸಂಭವಿಸಿತು. ಹಾದಿಯಲ್ಲಿ ಅಡ ಸಿಕ್ಕ ನದಿಯಲ್ಲಿ ಮೊಣಕಾಲು ಮುಳುಗುವಷ್ಟು ನೀರು. ವಿಜಯಸೈನ್ಯದ ಅರ್ಧಭಾಗ ನದಿ ದಾಟುವಷ್ಟರಲ್ಲಿ ನದಿ ಒಂದು ತೊಟ್ಟೂ ನೀರಿಲ್ಲದಾಗಿತ್ತು. ಮುಂದಿನ ದಂಡಾಳುಗಳು ಬಂದಾಗ ಮರಳಲ್ಲಿ ಗುಂಡಿ ತೋಡಿ ಕುಡಿಯಲು ನೀರು ಪಡೆಯಬೇಕಾಯ್ತು. ಇಂಥ ಅಗಾಧ ಜನಸಂಖ್ಯೆ ವಿಜಯಸೈನ್ಯದಲ್ಲಿ.

ವಿಜಯಸೈನ್ಯದಲ್ಲಿ ಹನ್ನೊಂದು ದಳ. ದಳಗಳು ಹಾದಿಸಾಗುತ್ತಿದ್ದಾಗ ಒಳನಾಡುಗಳ ದಂಡಾಳುಗಳ ತಂಡಗಳು ಬಂದು ಈ ದಳಗಳನ್ನು ಕೂಡಿಕೊಳ್ಳುತ್ತಿದ್ದವು. ಪ್ರತಿ ಉಪದಳವೂ ವಿಶಿಷ್ಟ, ವಿಚಿತ್ರ ಉಡಿಗೆತೊಡಿಗೆಗಳಿಂದ ಆಯುಧಗಳಿಂದ ಅಲಂಕೃತ, ಸನ್ನದ್ಧ. ಯುದ್ಧದಾನೆಗಳು ಪ್ರತಿಯೊಂದೂ ನಾಲ್ಕು ತೊಟ್ಟಿಲುಗಳಿಂದ ಬಿಗಿಯಲ್ಪಟ್ಟಿದ್ದು, ಒಂದೊಂದು ತೊಟ್ಟಿಲಲ್ಲಿ ಒಬ್ಬೊಬ್ಬ ಕಟ್ಟಾಳು ಕುಳಿತು ಒಂದೊಂದು ದಿಕ್ಕಿನಲ್ಲಿ ಕಾದಾಡಲು ಅವಕಾಶ. ಈ ಯುದ್ಧಹಸ್ತಿಗಳು ಯೋಧವಾಹಕ ಮಾತ್ರವಲ್ಲದೆ ಯುದ್ಧಸಮರ್ಥವೂ ಹೌದು ; ಅವುಗಳ ಮೆಯ್ಗೆ ಶತ್ರುಘಾತವಾಗದಂತೆ ಕವಚಗಳನ್ನು ತೊಡಿಸಲಾಗಿತ್ತು ; ಮಸೆವೆತ್ತ ಕೂರ್ಗತ್ತಿಗಳನ್ನು ಕೋರೆಗಳಿಗೆ ಕಟ್ಟಿದ್ದು, ಈ ಕೂರ್ಗತ್ತಿಗಳ ತೀವ್ರ ಆಘಾತದಿಂದ ಶತ್ರುದಳ ಛಿನ್ನವಿಚ್ಛಿನ್ನವಾಗುತ್ತಿತ್ತು. ವಿಜಯಸೈನ್ಯದಲ್ಲಿ ಫಿರಂಗಿದಳವೂ ಇದ್ದಿತು.

ನೀರಿನ ಸರಬರಾಯಿಗಾಗಿ ಹತ್ತು ಹನ್ನೆರಡು ಸಾವಿರ ಜನ ನಿಯಮಿತರು. ಈ ಜನ ದಂಡಿನ ಮುಂಭಾಗದಲ್ಲಿದ್ದು, ನೀರಿನ ಆಸರೆ ಸಿಕ್ಕಾಗ ಚರ್ಮದ ಚೀಲಗಳಲ್ಲಿ ತುಂಬಿಕೊಂಡು, ಹಾದಿಯ ಇಕ್ಕೆಲದಲ್ಲೂ ಕಾದು ನಿಂತಿರುತ್ತಿದ್ದರು. ದಂಡಾಳುಗಳು ದಾಹವಡಸಿದಾಗ ಈ ನೀರು ಪಡೆದು ತಣಿಯುತ್ತಿದ್ದರು. ಬೇಸಿಗೆಯ ಉರಿಬಿಸಿಲಲ್ಲಿ ದಂಡಾಳುಗಳು ನೀರು ಸಿಗದೆ ಸಾಯಬಾರದೆಂದು ಈ ಏರ್ಪಾಟು.

ಈ ಎಲ್ಲ ಜನಕ್ಕೆ ಮೂರು ನಾಲ್ಕು ಹರಿದಾರಿ ಮುಂದೆ ಐವತ್ತು ಸಾವಿರ ಜನ ; ಈ ಜನ ಮುಂದಿನ ಪ್ರದೇಶಗಳಲ್ಲಿ

ಶತ್ರುಸಂಚಾರ, ಸನ್ನಾಹ ಇರುವ ಬಗೆಗೆ ಜಾಗರೂಕತೆಯಿಂದ ಪರಿಶೀಲಿಸುವ ಗುಪ್ತಚಾರರು, ಅಲ್ಲದೆ ಸೈನ್ಯಕ್ಕೆ ಮುಂದಣ ಮಾರ್ಗವನ್ನು ಸಿದ್ಧಗೊಳಿಸಿಡುವ ಕೆಲಸಗಾರರು. ಈ ಕೆಲಸಗಾರರ ಇಕ್ಕೆಲದಲ್ಲೂ ಎರಡು ಸಾಸಿರ ಬಿಲ್ಗಾರರಾವುತರು ರಕ್ಷಕರಾಗಿ ಸಾಗಿದ್ದರು. ಅಲ್ಲದೆ, ಬಹು ಸಂಖ್ಯೆಯ ವ್ಯಾಪಾರಿಗಳು; ಯಾರಿಗೆ ಯಾವ ವಸ್ತು ಬೇಕೆನಿಸಿದರೂ ಈ ವ್ಯಾಪಾರಿಗಳಲ್ಲಿ ದೊರೆಯುತ್ತಿತ್ತು. ಪ್ರತಿ ದಳಪತಿಗೂ ಕೆಲಕೆಲವು ವ್ಯಾಪಾರಿಗಳು ನಿಯೋಜಿತರಾಗಿದ್ದು ಆಯಾ ನಾಯಕನಿಗೂ ಅವನ ದಳಕ್ಕೂ ಬೇಕಾದ ಪದಾರ್ಥಗಳನ್ನು ಒದಗಿಸಬೇಕಾಗುತ್ತಿತ್ತು.

ರಾಯ್ಚೂರಿಗೆ ಸಮೀಪದ ಮಲ್ಲಿಯಬಂಡೆಯನ್ನು ವಿಜಯಸೈನ್ಯ ತಲುಪಿತು. ದೂರ ಪ್ರಯಾಣದಿಂದ ಬಳಲಿದ್ದ ಸೇನೆ ವಿಶ್ರಮಿಸಲೆಂದು ರಾಯ ಅಲ್ಲಿ ಬೀಡುಬಿಟ್ಟನು. . ಸೈನ್ಯ ವಿಶ್ರಮಿಸಿದ ನಂತರ ರಾಯ್ಚೂರ ದಾಳಿಗಾಗಿ ಸಿದ್ಧತೆ ನಡೆಯ ತೊಡಗಿತು. ಬ್ರಾಹ್ಮಣರು ಪೂಜಾವಿಧಿಗಳನ್ನು ಪೂರಯಿಸಿ, ದೇವರು ವಿಜಯಪ್ರಸಾದವಿತ್ತಿರುವುದಾಗಿ ರಾಯನಿಗೆ ಅರುಹಿದರು.

ವಿಜಯಸೈನ್ಯದ ಮುಸಲ್ಮಾನಬಂಟರು ಸೈನ್ಯದ ಮುಂಭಾಗ ನಿಂತರು. ರಕ್ಷಣಾದಳನಾಯಕ ಕಾಮನಾಯಕನ ಸೇನೆ ರಾಯ್ಚೂರುದುರ್ಗದ ಕಂದಕಕ್ಕೆ ಬಹು ಸಮೀಪದಲ್ಲಿ ಪಾಳೆಯವನ್ನು ನೆಟ್ಟಿತು. ದುರ್ಗರಕ್ಷಕರ ಫಿರಂಗಿ, ಬಾಣಗಳ ಹಾವಳಿಯಿಂದ ಕೋಟೆಯ ಸಮೀಪ ಬಂದ ದಾಳಿಕಾರರು ತೀವ್ರ ಆಘಾತಕ್ಕೆ ಗುರಿಯಾದರು; ಆದರೂ ಹಿಮ್ಮೆಟ್ಟದೆ ಕಲಿತನದಿಂದ ಮುನ್ನುಗ್ಗಿ ಕಾದಾಡುತ್ತಿದ್ದರು. ದುರ್ಗರಕ್ಷಕರ ಪ್ರಬಲ ಪ್ರಹಾರಗಳಿಂದ ಉಂಟಾದ ಸಾವೇನೂ ಕಡಿಮೆ ಸಂಖ್ಯೆಯದಲ್ಲ. ದಂಡಾಳುಗಳನ್ನು ಹುರಿದುಂಬಿಸಲು ದಳಪತಿಗಳು ಹೊಸ ಹೊಸ ಉಪಾಯಗಳನ್ನು ಕೈಗೊಳ್ಳಬೇಕಾಗುತ್ತಿತ್ತು. ದಂಡಾಳುಗಳು ರಾಯ್ಚೂರ ಕೋಟೆಯಿಂದ ಕಿತ್ತು ತಂದ ಪ್ರತಿ ಕಲ್ಲಿಗೂ ಬಹುಮಾನ ಕೊಡುವ ಏರ್ಪಾಟು ಮೊದಲಾಯ್ತು; ಇದು ಕೋಟೆಯ ಪೌಳಿ ಹಲವು ಕಡೆ ಸಡಿಲವಾಗಲು ಉತ್ತೇಜಕ. ಪೌಳಿ

ಕೆಲವು ಎಡೆ ತೆರವಾಗಿ ಬಿದ್ದಿತು; ಆದರೂ ದುರ್ಗರಕ್ಷಕರು ಉಗ್ರ ಸಂಗ್ರಾಮವನ್ನೇ ಹೂಡಿದ್ದರು. ತಮ್ಮ ಕಡೆ ಮಿತಿಯಿಲ್ಲದೆ ಆಗುತ್ತಿದ್ದ ಸಾವುಗಳನ್ನು ಲೆಕ್ಕಿಸದೆ ವಿಜಯಸೈನಿಕರು ದಿನದಿನವೂ ಹೆಚ್ಚು ಹೆಚ್ಚು ಹುರಿಗೊಂಡು, ಉಗ್ರತರ ದಾಳಿಯನ್ನು ಕೈಗೊಳ್ಳುತ್ತಿದ್ದರು. ಕೋಟೆಯ ಪೌಳಿಯ ಬುಡದಲ್ಲಿ ಸತ್ತುರಗಿದ ದಂಡಾಳುಗಳ ದೇಹಗಳನ್ನು ಎಳೆದು ಹಾಕಿದವರಿಗೂ ಬಹುಮಾನ ಕೊಡುವುದು ಆರಂಭವಾಯ್ತು. ಹೀಗೆ ಮೂರು ತಿಂಗಳು ಉಗ್ರ ದಾಳಿ ನಡೆಯಿತು.

ರಾಯ್ಚೂರು ಸುಲಭದ ದಾಳಿಗೆ ವಶವಾಗುವ ದುರ್ಬಲ ದುರ್ಗವಲ್ಲ. ರಾಯ್ಚೂರಿಗೆ ಮೂರು ಸುತ್ತು ಬಲವಾದ ಗೋಡೆ; ಗಾರೆಯನ್ನೇ ಬಳಸದ ಕಲ್ಲಿನ ಕಟ್ಟಣೆ; ಗೋಡೆಯ ಒಳಮುಖ ಮಣ್ಣಿನಿಂದ ಗಟ್ಟಿಮಾಡಿದುದು. ಈ ಹೊರ ಕೋಟೆಯಿಂದ ಆವೃತವಾದ ವಲಯದ ನಡುವೆ ಬಹು ಎತ್ತರದ ಪ್ರದೇಶದಲ್ಲಿ ಸುಭದ್ರ ಒಳಕೋಟೆ; ಇಲ್ಲಿ ವರ್ಷವೆಲ್ಲ ನೀರುಕ್ಕುವ ಚಿಲುಮೆ. ಇಷ್ಟು ಎತ್ತರದ ಪ್ರದೇಶದಲ್ಲಿ ಚಿಮ್ಮುವ ಚಿಲುಮೆ ಸದಾ ಜಲಭರಿತವಾಗಿರುವುದೇ ಅಚ್ಚರಿ; ಪವಿತ್ರ ಸ್ಥಳವೆಂದೇ ಪರಿಗಣಿತ. ಇದಲ್ಲದೆ, ಹಲವಾರು ಕೆರೆಗಳೂ ಬಾವಿಗಳೂ ತುಂಬಿದ್ದು, ರಾಯ್ಚೂರಿಗರಿಗೆ ಎಂದೂ ನೀರಿನ ಕೊರತೆ ಇಲ್ಲ. ದೀರ್ಘ ಕಾಲ ಕೋಟೆಯನ್ನು ಮುತ್ತಿ, ನೀರು ಸಿಗದಂತೆ ಮಾಡಿ ಶರಣಾಗತಿ ಪಡೆಯುವ ಆಲೋಚನೆ ರಾಯನ ಮನಸ್ಸಿನಲ್ಲೂ ಸುಳಿಯುವ ಅವಕಾಶವಿಲ್ಲ. ರಾಯ್ಚೂರುದುರ್ಗದ ರಕ್ಷಣೆಗಾಗಿ ಕಾಲ್ಬಲ, ಅಶ್ವಸೈನ್ಯ, ಹಸ್ತಿಸೈನ್ಯ; ಭಾರಿಯಾದ ಶಿಲೆಗಳನ್ನು ದೂರ ಎಸೆದು ವಿಶೇಷ ವಿನಾಶ ಮಾಡಬಲ್ಲ ಮೂವತ್ತು ಕವಣೆ ಯಂತ್ರಗಳೂ ಸ್ಥಾಪಿತ. ಕೋಟೆಯ ಪೌಳಿಯ ಮೇಲೆ ಅನತಿ ದೂರಗಳಲ್ಲಿ ಶಿಖರಗಳು; ಶಿಖರಗಳಲ್ಲಿ ಫಿರಂಗಿಗಳು; ಹೀಗೆ ಪೌಳಿಯ ಮೇಲೆ ಇನ್ನೂರು ಫಿರಂಗಿಗಳೂ, ಅನೇಕಾನೇಕ ಚಿಕ್ಕ ಫಿರಂಗಿಗಳೂ ಇದ್ದವು. ವಿಜಯಸೈನ್ಯ ರಾಯ್ಚೂರಿಗೆ ಸಮೀಪಗತವಾದ ಕೂಡಲೆ, ದುರ್ಗದ್ವಾರವನ್ನು ಮುಚ್ಚಿ, ದ್ವಾರ ತೆರೆಯದಂತೆ ಕಲ್ಲಿನ ಕಟ್ಟಣೆಯನ್ನು

ಅಡ್ಡ ಕಟ್ಟಲಾಗಿತ್ತು. ಉತ್ತರ ದಕ್ಷಿಣ ದೆಸೆಗಳಲ್ಲಿ ಪೌಳಿ ಎತ್ತರದ ಕಲ್ಲುಗುಡ್ಡಗಳ ಮೇಲೆ ನಿಂತಿದ್ದು ದುರ್ಗಮ; ದಾಳಿಗೆ ಪೂರ್ವವೇ ಲೇಸು. ವಿಜಯಸೈನ್ಯ ರಾಯ್ಚೂರನ್ನು ಸುತ್ತುಗಟ್ಟಿದ್ದರೂ ಮೂಡಣದಲ್ಲಿ ಹೆಚ್ಚಾಗಿ ಕೇಂದ್ರೀಕೃತ; ರಾಯನ ಪಾಳೆಯವೂ ಇತ್ತಣೇ.

ರಾಯನ ಪಾಳೆಯಕ್ಕೆ ಸುತ್ತಲೂ ಎತ್ತರದ ಮುಳ್ಳುಬೇಲಿ; ಪ್ರವೇಶಕ್ಕಾಗಿ ಒಂದು ಕಡೆ ಮಾತ್ರ ತೆರವು; ಇಲ್ಲಿ ಬಾಗಿಲಿದ್ದು ಅಂಗರಕ್ಷಕರು ಹಗಲೂ ರಾತ್ರೆ ಕಾವಲು ಮಾಡುತ್ತಿದ್ದರು. ಮುಳ್ಳಿನ ವರ್ತುಲದ ಸುತ್ತಲೂ ಕಾವಲಿನ ಬಂಟರು ನಿಯತ ಸ್ಥಳಗಳಲ್ಲಿ ನಿಂತು ರಾತ್ರೆಯೆಲ್ಲ ಕಾವಲು; ಹೆಚ್ಚಿನ ಎಚ್ಚರಿಕೆಗಾಗಿ ಅಲ್ಲಲ್ಲಿ ನಾಯಕರೂ ಇರುತ್ತಿದ್ದರು. ರಾಜಶಿಬಿರದ ಒಳಗೂ ಹೊರಗೂ ಶತ್ರುಪಕ್ಷದ ಗುಪ್ತಚಾರರ ಸುಳಿವು ಕಂಡು ಹಿಡಿಯಲು ನಿಯತವಾಗಿದ್ದ ಗುಪ್ತದಳ. ದೇವಪೂಜೆಗೆ ಬ್ರಾಹ್ಮಣರು, ಗೃಹಕೃತ್ಯದ ಊಳಿಗದವರು ಇವರಿಗೆಲ್ಲ ರಾಜಶಿಬಿರದಲ್ಲೇ ಬಿಡಾರ.

ವಿಜಯಸೈನ್ಯದ ಶಿಬಿರ ಅಚ್ಚುಕಟ್ಟಾದ ಬೀದಿಗಳಾಗಿ ವಿಭಾಗಿತ. ಪ್ರತಿ ದಳಪತಿಯ ವಿಭಾಗಕ್ಕೂ ಪ್ರತ್ಯೇಕವಾದ ಮಾರುಕಟ್ಟೆ; ಇದೇ ವಿಜಯನಗರದ ಪೇಟೆಯೇನೋ ಎಂಬ ಭ್ರಮೆ ಉಂಟಾಗುವಂತೆ ಎಲ್ಲ ಪದಾರ್ಥಗಳೂ ದೊರೆಯುತ್ತಿದ್ದವು. ಆಹಾರದ ದಿನಸು ಮಾರುವ ಮಾರುಕಟ್ಟೆಯೇ ಬೇರೆ; ಬಟ್ಟೆಯ ಮಾರುಕಟ್ಟೆಯೇ ಬೇರೆ; ಇನ್ನೊಂದು ಪೇಟೆಯಲ್ಲಿ ಅನರ್ಘ್ಯ ವಜ್ರಾಭರಣಗಳು ನಿರ್ಮಿತವಾಗುತ್ತಿದ್ದವು, ಮಾರಲ್ಪಡುತ್ತಿದ್ದವು. ರಾಯ್ಚೂರಿನಂಥ ಒಣ, ಬರಡು, ಮರಳು ಪ್ರದೇಶದಲ್ಲಿ ಬೀಡುಬಿಟ್ಟದ್ದರೂ ಈ ಸಂತೆಗಳಲ್ಲಿ ದೊರೆಯುತ್ತಿದ್ದ ಹುಲ್ಲಿನ ಅಗಾಧ ಪ್ರಮಾಣ ಆಶ್ಚರ್ಯಕರ; ದಶಸಾವಿರಗಟ್ಟಲೆ ಕುದುರೆಗಳು, ನೂರುಗಟ್ಟಲೆ ಆನೆಗಳು, ವಿಜಯಸೈನ್ಯದ ಭಾರೀ ಸಾಮಾನು ಸರಂಜಾಮಿನ ಹೇರು ಹೊರುವ ಹೇಸರಕತ್ತೆಗಳು ಎತ್ತುಗಳು ಇವಕ್ಕೆಲ್ಲ ಎಷ್ಟು ಹುಲ್ಲು ಬೇಡ! ಪಾಳೆಯದ ಸಂತೆಗಳನ್ನು ನೋಡಿದವರಿಗೆ ಇದೊಂದು ಸಮೃದ್ಧ ನಗರವೆಂದು ಭಾವನೆ ಬರುತ್ತಿತ್ತೇ ವಿನಹ ಸಮರಶಿಬಿರವೆಂದಲ್ಲ.

ರಾಯ್ಚೂರ ಸೆರವಿಗಾಗಿ ಬಿಜಾಪುರದ ಸುಲ್ತಾನ ಆದಿಲ್‌ಷಹ ಭಾರಿ ಸೈನ್ಯದೊಂದಿಗೆ ಬಂದು, ಉತ್ತರದ ನದಿಯಾಚೆ ಬೀಡುಬಿಟ್ಟಿರುವ ಸುದ್ದಿ ರಾಯನಿಗೆ ತಲುಪಿತು. ಈ ಸುದ್ದಿ ಬಂದೊಡನೆಯೆ ವಿಜಯನಗರದ ಪಾಳೆಯದಲ್ಲಿ ಗುಜುಗುಜು. ಕೃಷ್ಣದೇವರಾಯನಿಗೆ ಹಿಂದಣ ಹಲವು ರಾಯರು ಸುಲ್ತಾನರ ಕೈಲಿ ಸೋತು ಭಂಗಪಟ್ಟಿದ್ದ ನೆನಪು ಹಳೆಯ ದಂಡಾಳುಗಳ ಮನಸ್ಸಿನಲ್ಲಿ ಇನ್ನೂ ತಳವುಳಿಸಿತ್ತು ; ತಮ್ಮ ಸದ್ಯದ ಬಲದ ಹೆಚ್ಚಳಿಕೆಯು, ತಮ್ಮ ಸದ್ಯದ ಅರಸನ ಹೆಚ್ಚಳಿಕೆಯ ಅರಿವು ಭೀತಿಯ ಮಂಜಿನಲ್ಲಿ ಮುಸುಕಾಗಿತ್ತು.

ನದಿಯಾಚೆ ಬೀಡುಬಿಟ್ಟ ಆದಿಲ್‌ಷಹ ಕೃಷ್ಣದೇವರಾಯನ ಚಲನವಲನಗಳನ್ನು ನಿರೀಕ್ಷಿಸುತ್ತ, ರಾಯನೇ ಮುಂದಾಗಿ ತನ್ನ ಮೇಲೆ ದಾಳಿಮಾಡಲಿ, ಎಂದು ಕಾದನು. ತನ್ನ ಬರವಿನ ಸುದ್ದಿ ತಿಳಿದ ಕೂಡಲೆ ವಿಜಯಸೈನ್ಯ ರೋಷಾವೇಶದಿಂದ ವಿಜಾಪುರಸೇನೆಯ ಮೇಲೆ ನುಗ್ಗುವುದಾಗಿ ಆದಿಲ್‌ಷಹನ ಎಣಿಕೆ. ಆದಿಲ್‌ಷಹನ ಶಿಬಿರ ಆತನಿಗೆ ಯುದ್ಧಕ್ಕೆ ಕ್ಷೇಮತಮ ಸ್ಥಾನ; ತನ್ನ ಸೇನೆಯ ಮುಂದೆ ನದಿಯಿದ್ದು ತಾವು ಬಹು ಸಮಂಜಸ ರೀತಿಯಲ್ಲಿ ಸಂರಕ್ಷಣೆ ಮಾಡಿಕೊಳ್ಳಬಹುದೆಂದು, ವಿಜಯಸೈನ್ಯದ ಮುನ್ನಡೆಯನ್ನು ದಿನದಿನವೂ ಪ್ರತೀಕ್ಷಿಸಿದನು.

ರಾಯನಾದರೋ ಚಲಿಸಲಿಲ್ಲ, ಏನೂ ಮಾಡಲಿಲ್ಲ. ರಾಯನ ತಾಟಸ್ಥ್ಯದಿಂದ ಆದಿಲ್‌ಷಹ ಕಂಗಾಲು. ರಾಯನ ತಾಟಸ್ಥ್ಯದ ಬಗೆಗೆ ಸುಲ್ತಾನನ ಮಂತ್ರಾಲೋಚಕರಲ್ಲಿ ಒಬ್ಬೊಬ್ಬರದು ಒಂದೊಂದು ಅಭಿಪ್ರಾಯ. ರಾಯ ತಮ್ಮನ್ನು ಬಹು ಅಲ್ಪವಾಗಿ ಪರಿಗಣಿಸಿರುವನೆಂದೂ, ಈ ರೀತಿ ಕಡೆಗಣಿಸಿ ವಿಜಯಸೈನ್ಯದ ಸಾಮರ್ಥ್ಯದ ಬಗೆಗೆ ಗರ್ವಪ್ರದರ್ಶನ ಮಾಡುತ್ತಿದಾನೆಂದೂ, ತಾವೇ ನದಿಯನ್ನು ದಾಟಿ ಯುದ್ಧ ಹೂಡಲು ಕಾದಿರುವನೆಂದೂ ಅಂಕುಸ್‌ಖಾನ್ ಮುಂತಾದವರ ಭಾವನೆ. ಹಿಂದಣ ಸಮರಗಳಲ್ಲಿ ವಿಜಯನಗರದರಸರಿಗೆ ಉಂಟಾದ ಪರಾಭವಗಳಿಂದ ರಾಯ ಭೀತಿಗೊಂಡಿರುವನು ; ಆದಿಲ್‌ಷಹ ತನ್ನ ದೌರ್ಬಲ್ಯವನ್ನು ಪ್ರದರ್ಶಿಸಬಾರದು ; ತಾವು ತಾಟಸ್ಥ್ಯವನ್ನು

ಹೆಚ್ಚು ಕಾಲ ವಹಿಸಿದಷ್ಟೂ ತಮಗೆ ಅನನುಕೂಲ, ಶತ್ರುವಿಗೆ ಅನುಕೂಲ; ವಿಜಾಪುರಸೇನೆ ವಿಜಯಸೇನೆಗಿಂತ ಸಂಖ್ಯೆಯಲ್ಲಿ ಅಲ್ಪವಾದರೂ, ಹಿಂದಣ ಸಮರಗಳ ಸೋಲಿನ ದಿಗಿಲಿನಿಂದ ವಿಜಯಸೈನಿಕರು ತಲ್ಲಣಗೊಂಡಿದ್ದು, ತಾವೇ ಈಗ ಬಲಿಷ್ಠರು; ತಾವೇ ಮುನ್ನುಗ್ಗಿ ವಿಜಯಸೈನ್ಯವನ್ನು ಧೂಳೀಪಟಮಾಡಬೇಕು, ಎಂಬುದು ಇತರರ ಅಭಿಪ್ರಾಯ. ಮೊದಲು ತನ್ನ ಸೈನ್ಯವನ್ನು ಸಜ್ಜುಗೊಳಿಸುವುದು, ನಂತರ ಸಿರ್ಧಾರವನ್ನು ಕೈಗೊಳ್ಳುವುದು, ಎಂದು ಕೊಂಡನು ಸುಲ್ತಾನ. ವಿಜಾಪುರಸೀಮೆಯ ಹಲವೆಡೆಗಳಿಂದ ಬಂದು ನದೀತೀರದಲ್ಲಿ ತಂಗಿದ ಸೈನ್ಯವನ್ನೆಲ್ಲ ಒಟ್ಟುಗೂಡಿಸಿ, ಸಜ್ಜುಗೊಳಿಸಿದನು. ಕಾಲಾಳು, ಬಿಲ್ಗಾರರು, ಗುರಾಣಿಕಾರರು, ಈಟಿಗಾರರು, ತುಪಾಕಿಗಾರರು, ಅಶ್ವಸೈನ್ಯ, ಹಸ್ತಿಸೈನ್ಯ ಎಲ್ಲವೂ ಸನ್ನದ್ಧ. ತನ್ನ ಫಿರಂಗಿಗಳನ್ನು ವೀಕ್ಷಿಸಿದಾಗ, ಗೆಲುವು ತನಗೇ, ಎಂಬ ಆಶ್ವಾಸನೆ ಮೂಡಿತು ಆದಿಲ್‌ಷಹನಿಗೆ. ನದಿಯನ್ನು ಕೂಡಲೇ ದಾಟಿ, ಕರ್ಣಾಟಕಸೇನೆಯ ಮೇಲೆ ಮುಗಿದುಬೀಳ ಬಯಸಿದನು; ಇದರಿಂದ ತನಗೆ ಗೆಲುವುಂಟಾಗಿ, ರಾಯ್ಚೂರೂ ಉಳಿಯುವುದೆಂದು ಭಾವನೆ.

ವಿಜಾಪುರಸೈನ್ಯ ಹಾಯ್ಗಡವನ್ನು ದಾಟಿತು. ದಾಟಿ, ವಿಜಯಸೈನ್ಯಕ್ಕೆ ಮೂರು ಹರಿದಾರಿ ದೂರದಲ್ಲಿ ತಳವೂರಿತು. ನೀರಿನ ಸರಬರಾಯಿ ಚೆನ್ನಾಗಲೆಂದು ಸೇನೆ ನದೀಮುಖಕ್ಕೆ ಹರಡಿಕೊಂಡು, ಅಗಲವಾಗಿ ಬೀಡು ಬಿಟ್ಟಿತು. ಪಾಳೆಯದ ಮುಂದೆ ಅಗಳು ತೋಡಲಾಯ್ತು. ಫಿರಂಗಿಸೈನ್ಯವನ್ನು ಮುಂಭಾಗದಲ್ಲಿ ನಿಲಿಸಲಾಯ್ತು. ಕರ್ಣಾಟಕಸೈನ್ಯವೇ ದಾಳಿಯನ್ನು ಉಪಕ್ರಮಿಸಿದರೆ ವರ್ತಿಸಬೇಕಾದ ರೀತಿಯನ್ನು ಸೈನ್ಯಕ್ಕೆ ಅರುಹಲಾಯ್ತು.

ಶತ್ರು ಮುಂದುವರಿಯಲು, ಕರ್ಣಾಟಕಸೈನ್ಯವೂ ಸಜ್ಜಾಗಿ ಮುನ್ನಡೆಯಿತು. ವೃದ್ಧನಾದರೂಪ ರಾಕ್ರಮಿಯಾದ, ಶ್ರೀರಂಗಪಟ್ಟಣದ ಒಡೆಯ ಕುಮಾರವೀರಯ್ಯ. ಮುಂಚೂಣಿ ತನಗೇ ಮೀಸಲಾಗಬೇಕೆಂದು ರಾಯನನ್ನು ಬೇಡಿ ಪಡೆದನು. ಕುಮಾರವೀರಯ್ಯನೂ, ಆತನ ವಯಸ್ಕರೂ ಶೂರಯೋಧರೂ ಆದ ಮೂವತ್ತು ಮಕ್ಕಳೂ ಆದಿಲ್‌ಷಹನ

ಡೇರೆಗೆ ಒಂದು ಹರಿದಾರಿ ಹತ್ತಿರ ಪಾಳೆಯಬಿಟ್ಟರು. ಕಟ್ಟಾಳುಗಳೆಲ್ಲ ಶಸ್ತ್ರಪಾಣಿಗಳಾಗಿ ಕಾಳಗದ ಮುಖಕ್ಕೆ ನುಗ್ಗಲು ಅಣಿಯಾದರು.

ಶನಿವಾರದ ಮುಂಜಾವು. ವಿಜಯಪಾಳೆಯದಲ್ಲಿ ಭೇರಿ, ಕಹಳೆ, ಶಂಖ ಮುಂತಾದ ವಾದ್ಯಗಳನ್ನೆಲ್ಲ ಯುದ್ಧ ಸೂಚಕವಾಗಿ ಮೊಳಗಲಾಯ್ತು. ಆಕಾಶವೇ ಕಡಿದುಕೊಂಡು ಭೂಮಿಯ ಮೇಲೆ ಬಿದ್ದಂಥ ಮಹಾಸಿನಾದ ಉಂಟಾಯಿತು. ವಿಜಯಸೈನಿಕರು ಉಬ್ಬಿನಿಂದ ಅಬ್ಬರಿಸಿದರು; ಕುದುರೆಗಳು ಕೆನೆದವು; ಆನೆಗಳು ಘೀಳಿಟ್ಟವು. ರಾಯ್ಚೂರಿಗರ ಎದೆ ತಲ್ಲಣಿಸಿತು. ಈ ಶಬ್ದಗಳನ್ನು ಉಂಟುಮಾಡಿದವರೂ ಕೂಡ ಭೀತಿಗೊಂಡರು. ಶತ್ರುಗಳೇನೂ ನಿಶ್ಶಬ್ದವಾಗಿರಲಿಲ್ಲ; ಅವರೂ ರಣಧ್ವನಿ ಮಾಡಿದರು. ಉಭಯ ಶಿಬಿರಗಳಲ್ಲೂ ಯಾರು ಮಾತನಾಡಿದರೂ ಪಕ್ಕ ನಿಂತವರಿಗೂ ಕೇಳದು; ಎಲ್ಲವನ್ನೂ ಬರಿ ಸಂಜ್ಞೆಯಿಂದಲೆ ತಿಳಿಸಬೇಕು. ಈ ವೇಳೆಗೆ ವಿಜಯಶಿಬಿರದ ಮೇಗಡೆ ಹಾರಾಡುತ್ತಿದ್ದ ವಿವಿಧ ಪಕ್ಷಿಗಳು ಈ ಮಹಾನಾದದಿಂದ ತಲ್ಲಣಗೊಂಡು, ಮುಂದೆ ಹಾರಲಾರದೆ ಕೆಳಕ್ಕಿಳಿದವು. ವಿಜಯಸೈನಿಕರು ಈ ಅಮಿತ ಸಂಖ್ಯೆಯ ಹಕ್ಕಿಗಳನ್ನು ಹಿಡಿದು, ಆಹಾರಕ್ಕಾಗಿ ಇಟ್ಟುಕೊಂಡರು. ಪ್ರತಿ ಬಾರಿಯ ಯುದ್ಧಸೂಚಕ ನಿನಾದವುಂಟಾದಾಗಲೂ ಹಕ್ಕಿಗಳು ಪಾಳೆಯಕ್ಕಿಳಿದು ಆಹಾರವಾಗುತ್ತಿದ್ದವು.

ಸೂರ್ಯ ತುಸು ಮೇಲೇರಿದ್ದನು; ಉದಯಕಾಲದ ಕೆಂಬಣ್ಣ ಅಳಿದು, ಬಿಳಿಪಾಗಿತ್ತು. ವಿಜಯಸೈನ್ಯದ ಮುಂದಿನೆರಡು ದಳಗಳು ಶತ್ರುವಿನ ಮೇಲೆ ಮುಗಿದುಬಿದ್ದು ಶತ್ರುಸೈನ್ಯನಿರ್ಮೂಲನ ಮಾಡಲು ರಾಯ ಆಣತಿಸಿದನು. ಪುತ್ರಸಮೇತನಾದ ಕುಮಾರವೀರಯ್ಯನ ದಳ ರೋಷಾವೇಶದಿಂದ ದಾಳಿಮಾಡಿತು; ತೀವ್ರವಾದ ಮುನ್ನಡೆಯಿಂದ ವಿಜಯಸೈನಿಕರು ಕೊಂಚ ಹೊತ್ತಿನಲ್ಲೇ ಶತ್ರುಶಿಬಿರದ ಕಂದಕದ ಪಕ್ಕದಲ್ಲಿದ್ದರು. ವಿಜಯಸೈನ್ಯ ಹೀಗೆ ಏಕಾಏಕಿ ತಮ್ಮ ಮೇಲೇರಿ ನುಗ್ಗಲು ಆದಿಲ್‌ಷಹ ಭೀತನಾಗಿ, ತನ್ನ ಫಿರಂಗಿಸೈನ್ಯವನ್ನೆಲ್ಲ ಕೂಡಲೇ ಕಾರ್ಯಾಚರಣೆಯಲ್ಲಿ ತೊಡಗಿ

ಸಿದನು. ಅನಿರೀಕ್ಷಿತವಾದ ಸಿಡಿಮದ್ದಿನ ಪ್ರತಿಭಟನೆಯಿಂದ ವಿಜಯಸೈನ್ಯ ಕಕ್ಕಾವಿಕ್ಕಿಯಾಯಿತು ; ಸೇನೆಯ ಮುಂಭಾಗ ಅತ್ಯುಗ್ರ ಆಘಾತಕ್ಕೆ ಗುರಿಯಾಯ್ತು. ಬಹು ಸಂಖ್ಯೆಯಲ್ಲಿ ಕಾಲಾಳು, ಕುದುರೆ, ಆನೆಗಳು ನೆತ್ತರು ಕಾರುತ್ತ ನೆಲಕ್ಕೊರಗಿದವು ; ಉಳಿದವರು ಹಿಮ್ಮೆಟ್ಟಿದರು. ವಿಜಯಸೈನ್ಯ ನಿರ್ಗಮಿಸುತ್ತಿರುವುದನ್ನು ನೋಡಿ ವಿಜಾಪುರಸೈನ್ಯಕ್ಕೆ ಹೊಸ ಹುಮ್ಮಸ್ಸು ; ಉಗ್ರ ಪ್ರತಿಪಾಳಯೆಸಗಿತು. ಶತ್ರುವಿಗೆ ಎದುರಾಗಿ ಯುದ್ಧಕ್ಕಾಗಿ ನಿಂದಿರುವ ಒಬ್ಬ ದಂಡಾಳುವೂ ಇಲ್ಲ ; ವಿಜಯಸೈನಿಕರೆಲ್ಲ ಬೆಂಗೊಟ್ಟು ಸಮರರಂಗದಿಂದ ಓಡತೊಡಗಿದ್ದರು ; ಶತ್ರುಸೈನ್ಯ ಬೆನ್ನಟ್ಟಿ ಬರುತ್ತ ಕಗ್ಗೊಲೆ ಯೆಸಗಿತು. ತನ್ನ ದಂಡಿನ ಅಪವರ್ತನೆಯನ್ನು ಈಕ್ಷಿಸಿ ರಾಯನ ಮೈ ಮುಳ್ಳಾಯಿತು ; ಉಚ್ಚಧ್ವನಿಯಿಂದ ಕೂಗಿ ಹೇಳತೊಡಗಿದನು.

'ಹೇಡಿಗಳಿರ ! ಕರ್ಣಾಟಕಮಾತೆಗೆ ಕಳಂಕ ತರುವ ಹಂದಿಗಳಿರ ! ಬೆಂಗೊಟ್ಟು ಓಡಿದವರಿಗೆ ಮರಣದಂಡನೆ. ಹೇಡಿಗಳಂತೆ ಮರಣಕ್ಕೆ ತುತ್ತಾಗುವುದರ ಬದಲು ಶತ್ರುಗಳನ್ನು ಪ್ರತಿಭಟಿಸಿ ವೀರಸ್ವರ್ಗವನ್ನಾದರೂ ಪಡೆಯಿರಿ. ನನ್ನ ಜೊತೆ ಸಮರಮುಖಕ್ಕೆ ಮುನ್ನುಗ್ಗುವರಾರು ಬನ್ನಿ, ಓಡಿ ಬನ್ನಿ ' .

ಹಲಹಲವು ಪ್ರಾಂತಾಧಿಕಾರಿಗಳೂ ದಳಪತಿಗಳೂ ನಾಯಕರೂ ರಾಯನ ಸುತ್ತ ನಿಂತು ' ಕರ್ಣಾಟಕದೇವಿಗೆ ವಿಜಯವಾಗಲಿ ' ಎಂದು ಬೊಬ್ಬಿರಿದರು. ರಾಯನ ಮುಖ ಭಾವಮಯತೆಯಿಂದ ಉದ್ವಿಗ್ನವಾಯ್ತು. 'ಕರ್ಣಾಟಕ ಸಿಂಹನನ್ನು ನಿಹತಮಾಡಿದೆ, ಎಂದು ಬೇಕಾದರೆ ಆದಿಲ್‌ಷಹ ಕೊಚ್ಚಿಕೊಳ್ಳಲಿ ; ಕರ್ಣಾಟಕಸಿಂಹನನ್ನು ಜಯಿಸಿದೆ, ಎಂದು ಬೀಗುವ ಹೆಮ್ಮೆಗೆ ಮಾತ್ರ ಅವಕಾಶ ಬೇಡ ' ಎಂದನು. ತನ್ನ ಬೆರಳುಂಗುರವನ್ನು ತೆಗೆದು ದೂತನ ಕೈಗಿತ್ತು ಆಣತಿಯಿತ್ತನು ' ಹೋಗು. ರಾಜ ಸಮರರಂಗದಲ್ಲಿ ನಿಹತನಾದನೆಂದು ರಾಣಿವಾಸಕ್ಕೆ ತಿಳಿಸಿ, ಗುರುತಾಗಿ ನನ್ನುಂಗುರವನ್ನು ತೋರಿಸು. ಅವರೆಲ್ಲ ಅಗ್ನಿ ಪ್ರವೇಶಮಾಡಲಿ.'

ರಾಯ ಅಶ್ವಾರೋಹಿಯಾಗಿ ಸಮರಮುಖಕ್ಕೆ ನುಗ್ಗಿದನು. ಸಂಗಡಿಗ ದಳಪತಿಗಳೂ ದಳಗಳೂ ರಾಯನನ್ನು ಅನುಸರಿಸಿದವು; ರಣಭೂಮಿಯಿಂದ ಓಡುತ್ತಿದ್ದವರನ್ನೆಲ್ಲ ಕತ್ತಿಯ ಮೊನೆಗೆ ಗುರಿಮಾಡಬೇಕೆಂದು ಕಟ್ಟಾಣತಿಯೀಯಲು, ಬೆಂಗೊಟ್ಟೋಡುತ್ತಿದ್ದವರೆಲ್ಲ ಹಿಂದಿರುಗಿ ಶತ್ರುಸಮೂಹದ ಮೇಲೆ ನುಗ್ಗಲೇಬೇಕಾಯ್ತು. ಅರಸನ ಸನ್ನಿಧಾನದಿಂದ ಹುರುಪುಗೊಂಡ ಸೇನೆ ಅತ್ಯುಗ್ರ ರೀತಿಯಲ್ಲಿ ಶತ್ರುಸಮೂಹದ ಮೇಲೆ ಆಕ್ರಮಣ ಮಾಡಿತು; ಇಂಥ ಅನಿರೀಕ್ಷಿತ ಪ್ರತಿದಾಳಿಯ ಉಗ್ರತೆಯನ್ನು ತಾಳಲಾರದೆ ವಿಜಾಪುರಸೇನೆ ಬೆಂಗೊಟ್ಟಿತು. ವಿಜಯಸೈನಿಕರನ್ನು ಅಟ್ಟಿಕೊಂಡು ಓಡಿ ಬರುತ್ತಿದ್ದ ವಿಜಾಪುರಸೇನೆ ಅವ್ಯವಸ್ಥಿತವಾಗಿ ಚದುರಿತು; ಕನ್ನಡ ಕಟ್ಟಾಳುಗಳ ಅನಿರೀಕ್ಷಿತ ಉಗ್ರ ಆಘಾತದಿಂದ ವಿಜಾಪುರಸೇನೆಯಲ್ಲಿ ಗಲಿಬಿಲಿಯುಂಟಾಗಿ ದಿಕ್ಕೇ ತೋಚದಾಯ್ತು. ಕ್ಷಣಾರ್ಧದಲ್ಲಿ ಸಮರಾಂಗಣದ ರೀತಿಯೇ ಬೇರೆ; ಕನ್ನಡಕಟ್ಟಾಳುಗಳು ಬೆಂಗೆಟ್ಟು ಪಲಾಯನ ಸೂಕ್ತ ಪಠಿಸಿದ್ದ ದೃಶ್ಯ ಮರೆಯಾಗಿ, ವಿಜಾಪುರಸೈನಿಕರು ಜೀವ ಭಯದಿಂದ ಓಡತೊಡಗಿದ್ದುದು ಗೋಚರ; ಭೀತಿ ಗೊಂದಲಗಳಿಗೆ ತುತ್ತಾಗಿ, ತಾವು ಬಹು ಶ್ರಮದಿಂದ ರಚಿಸಿದ್ದ ಶಿಬಿರವನ್ನು ಸಂರಕ್ಷಿಸಲೂ ತೊಡಗದೆ, ವಿಜಾಪುರಸೈನಿಕರು ಜೀವಭಯದಿಂದ ತಲ್ಲಣಗೊಂಡು ಹಿಂದಕ್ಕೆ ಓಡುತ್ತಿದ್ದವರು ಅಷ್ಟು ಸಿಕ್ಕ ನದಿಯಲ್ಲಿ ಹಾರಿದರು. ಕೈಗೆಟಕಿದ ಶತ್ರುಗಳನ್ನು ವಧಿಸಿ, ಓಡಿದವರ ಬೆನ್ನಟ್ಟಿಬಂದ ಕನ್ನಡಕಟ್ಟಾಳುಗಳು ನದೀತೀರದಲ್ಲಿ ನಿಂತರು. ವಿಜಯನಗರದ ಯುದ್ಧಹಸ್ತಿಗಳು ಶತ್ರುಗಳನ್ನಟ್ಟಿ ನದೀಪ್ರವಾಹದಲ್ಲಿ ಧುಮುಕಿದವು; ಹಸ್ತಿಗಳು ಶತ್ರುಸೈನಿಕರನ್ನು ದಂತಗಳಿಂದ ತಿವಿದು, ಸೊಂಡಿಲಿನಿಂದ ಎತ್ತಿ, ಛಿದ್ರಛಿದ್ರಮಾಡಿ ಎಸೆದವು. ಆನೆಗಳ ಅಂಬಾರಿಗಳಲ್ಲಿ ಆಸೀನರಾಗಿದ್ದ ಯೋಧರೂ ಅಮಿತ ಶತ್ರುವಧೆಯೆಸಗಿದರು. ನದೀಪ್ರವಾಹ ಶತ್ರುರಕ್ತದಿಂದ ಕೆಂಪಾಯಿತು.

ವಿಜಾಪುರ ಶಿಬಿರದಲ್ಲಿದ್ದ ಹೆಂಗಸರು ಮಕ್ಕಳು ಭಯಗ್ರಸ್ತರಾಗಿ ನದೀತೀರಕ್ಕೆ ಓಡಿಬಂದು ಗಂಪುಕಟ್ಟಿಗೊಂಡಿದ್ದರು.

ವಿಜಾಪುರದ ಅಶ್ವದಳವೂ ನದಿ ದಾಟಲೆಂದು ಪ್ರವಾಹದಲ್ಲಿಳಿದಿದ್ದು ಮುಂದೆ ಸಾಗಲಾರದೆ ನೀರಲ್ಲೇ ನಿಂತಿತು; ಈ ಅಶ್ವಗಳು ಅಸಹಾಯಕತೆಯಲ್ಲಿ ಗಾಬರಿಗೊಂಡು ದಿಕ್ಕುಗೆಟ್ಟು ತಮ್ಮ ಜನದ ಮೇಲೇ ಬಿದ್ದು ಹೆಚ್ಚು ಅನಾಹುತ ವೆಸಗಿದವು; ವಿಜಾಪುರದ ಆನೆಗಳೂ ಹೊಳೆಗೆ ಹಾರಿದವು; ತಮ್ಮ ದಂಡಾಳುಗಳನ್ನೇ ಸಿಗಿದುಹಾಕಿದವು. ಕನ್ನಡ ಕಟ್ಟಾಳುಗಳಾವರೋ ಕೈದುಗಳನ್ನು ಝಳಪಿಸುತ್ತ ದಡದಲ್ಲೇ ನಿಂತಿದ್ದರು; ನದಿಯಲ್ಲಿ ಮುಂಸಾಗಲಾರದೆ ಹಿಂಬಂದ ಶತ್ರುಪುರುಷರನ್ನು ಖಡ್ಗದ ಬಾಯ್ಗೆ ತುತ್ತಾಗಿಸುತ್ತಿದ್ದರು.

ರಾಯ ನದೀತಟಕ್ಕೆ ಆಗಮಿಸಿದನು. ಅಮಿತ ಶತ್ರುನಾಶ ಆಗಿದ್ದುದನ್ನು, ಇನ್ನೂ ಆಗುತ್ತಿರುವುದನ್ನು ನೋಡಿ ಮರುಗಿದನು. ಶತ್ರುಬಲ ಮುರಿದಾಯ್ತು; ಪ್ರತಿಭಟನೆ ನಿರ್ನಾಮವಾಯ್ತು: ನಿರಪರಾಧಿ ಯೋಧರು ಅನ್ಯಥಾ ಸಾಯಲೇಕೆ! ಕನ್ನಡ ಸೇನೆ ಕಗ್ಗೊಲೆಯನ್ನು ನಿಲ್ಲಿಸಲೆಂದು ರಾಯನ ಆಣತಿ; ದಳನಾಯಕರೆಲ್ಲ ರಾಜಾಜ್ಞೆಯಂತೆ ಸೈನ್ಯವನ್ನು ಹಿಂದಿರುಗಿಸಿದರು.

ಆದಿಲ್‌ಷಹನ ತೆರವಾದ ಶಿಬಿರಕ್ಕೆ ಕೃಷ್ಣದೇವರಾಯ ನಡೆತಂದು, ಷಹನ ಡೇರೆಯನ್ನು ಪ್ರವೇಶಿಸಿದನು. ಅಲ್ಲಿನ ವಿಲಾಸಜೀವನದ ಕುರುಹುಗಳು, ಸುಲ್ತಾನೀದೌಲತ್ತಿನ ವೈಚಿತ್ರ್ಯ ವೈಶಿಷ್ಟ್ಯತೆಗಳು ರಾಯನ ಕಣ್‌ಕುಕ್ಕಿದವು. ವಿಜಯನಗರದಷ್ಟು ಸಂಪದ್ಯುಕ್ತವಲ್ಲದಿದ್ದರೂ ವಿಜಾಪುರವೇನೂ ಕ್ಷುದ್ರ ದರಿದ್ರ ರಾಜ್ಯವಲ್ಲ. ಹಲವು ಶತಮಾನಗಳಿಂದ ಸುಲ್ತಾನೀ ದೌಲತ್ತನ್ನು ಕಾಪಿಟ್ಟುಕೊಂಡ ಶ್ರೀಮಂತನೆಲೆವೀಡು. ಆದಿಲ್‌ಷಹನಿಗಾಗಿ ಪರ್ಷಿಯದಿಂದ ನಿರ್ಮಿತವಾಗಿ ಬಂದ ಹಕ್ಕಿಯ ಗರಿಗಳ ಹಾಸಿಗೆಯಲ್ಲಿ ರಾಯ ಮೈಚಾಚಿದನು; ಬಳಲಿ ಬಸವಳಿದಿದ್ದವನ ಮೈಗೆ ಅಮೃತಲೇಪನ ಮಾಡಿದಷ್ಟು ಸುಖ. ಆಹ್! ತಾನೆಂಥ ಸಾರ್ವಭೌಮನಾದರೂ ಇಂಥ ಸುಖಶಯ್ಯೆ ತನಗಿಲ್ಲವಲ್ಲ. ವಿಜಯದ ಮನಸ್ಸುಖದ ಗಳಿಗೆಯಲ್ಲಿ ದೇಹಸುಖವೂ ಒದಗಿ ರಾಯ ಕಾಯಾ ವಾಚಾ ಮನಸಾ ವಿಶ್ರಾಂತ.

ತುಸು ಸಮಯದಲ್ಲಿ ಸಾಳುವ ತಿಮ್ಮ. ಕುಮಾರವೀರಯ್ಯ ಅರಸನನ್ನು ಅರಸಿಬಂದರು. ರಣಭೂಮಿಯಲ್ಲಿ ಇರುವೆನೆಂಬ ಪರಿವೆಯೇ ಇಲ್ಲದೆ ನಿದ್ರಾಮುದ್ರಿತನಾಗಿದ್ದ ರಾಯನನ್ನು ಕಂಡು ಇಬ್ಬರೂ ಕಂಗಾಲು. ಮಾತಿನ ದನಿ ಕೇಳಿ ರಾಯ ಕಣ್ದೆರೆದನು.

'ಪ್ರಭು. ಹಲವು ದಶಕಗಳಿಂದ ತೋಳದಂತೆ ಮೇಲ್‌ಬಿದ್ದು ಉಪಟಳವೀಯುತ್ತಿದ್ದ ಶತ್ರು ಇಂದು ಬೆದರಿದ ಹುಲ್ಲೆಯಂತೆ ಬೆಂಗೊಟ್ಟೋಡುತ್ತಿದಾನೆ. ಶತ್ರುನಿರ್ಮೂಲನ ಮಾಡಲು ಇದಕ್ಕಿಂತ ಸದವಕಾಶವುಂಟೆ. ವಿಶ್ರಾಂತಿ ಈಗ ಸಲ್ಲದು.' ಎಂದ ಸಾಳುವ ತಿಮ್ಮ.

'ವಿಜಯ ವಿಜೃಂಭಿಸುತ್ತಿರುವಾಗ ಬೇಟೆಯ ಕೋಟಲೆಯೇಕೆ ?'

'ದಿಕ್ಕುಗೆಟ್ಟು ಓಡುತ್ತಿರುವ ಅರಿಬಲವನ್ನು ಈಗಲೇ ಬೆನ್ನಟ್ಟಿ ಬಡಿಯಬೇಕು. ಗಾಯಗೊಂಡು ಉರುಳಿರುವ ತೋಳವನ್ನು ಕಡಿದುಹಾಕಿದರೆ ಮುಂದೆ ಮತ್ತೆ ಅದರಿಂದ ವಿಪತ್ತಿಲ್ಲ. ನಿಮಗೆ ವಿಶ್ರಾಂತಿ ಅವಶ್ಯಕವಾದರೆ, ಅವಶ್ಯ ಕಾರ್ಯವನ್ನು ನಾವಾದರೂ ಮುಗಿಸಿಕೊಡುವೆವು. ಶತ್ರುನಾಶಕ್ಕೆ ಕತ್ತಲೆ ಮುಸುಕುವವರೆಗೂ ಇರುವ ಅಪೂರ್ವ ಅವಕಾಶವನ್ನು ಕಳೆದುಕೊಳ್ಳಲಾಗದು. ನಮಗಾದರೂ ಅಣತಿಯಾಗಲಿ.'

ಚಂಚಲನಾಗದೆ ರಾಯ ಉತ್ತರಿಸಿದನು 'ಶತ್ರು ಪರಾಜಿತನಾದುದಲ್ಲದೆ ನಿರಪರಾಧಿಗಳಾಗಲಿ ಸಾವಿರಗಟ್ಟಲೆ ಕಗ್ಗೊಲೆಗೀಡಾಗಿದಾರೆ. ಆದಿಲ್‌ಷಹ ಅಪರಾಧಿಯಾಗಿದ್ದರೆ ಬದುಕೆಲ್ಲ ನೆನೆಸಿಕೊಳ್ಳುವಷ್ಟು ಶಿಕ್ಷೆ ಸಂದಾಗಿದೆ. ಅಲ್ಲದೆ, ರಾಯಚೂರನ್ನು ಜಯಿಸಲೆಂದು ನಾವು ದಂಡೆತ್ತಿ ಬಂದಿದ್ದು, ಈ ಕಾರ್ಯ ಪೂರ್ಣವಾಗದೆ ನಮ್ಮ ಬಲವನ್ನು ಶತ್ರು ಮರ್ದನದಲ್ಲಿ ತೊಡಗಿಸಿ ಬಳಲಿಸುವುದು ಅಯುಕ್ತ. ರಾಯಚೂರ ದಾಳಿಯನ್ನು ಉಗ್ರತರವಾಗಿಸುವುದೇ ನಮ್ಮ ಮೊದಲ ಕೆಲಸ.'

ಆದಿಲ್‌ಷಹ ತನ್ನ ಸೇನೆಯ ಅಧಿಕಭಾಗ ಅಳಿದಿರುವಾಗ ಅಬಲನಾಗಿ, ಅಪಜಯದ ಅಗೌರವದಲ್ಲಿ ಬದುಕಿರಲೂ ಬಯಸನೆಂದೂ, ಬಹುಶಃ ರಣಭೂಮಿಯಲ್ಲೆ ಕೊಲೆಗೀಡಾಗಿರಬಹುದೆಂದೂ ರಾಯನ ವೃಥ ನಂಬಿಕೆ; ಇದರಿಂದಾಗಿ, ಉಳಿದ ಶತ್ರುಬಲದ ಬೆನ್ನಟ್ಟಿ ಹೋಗುವುದೇ ವ್ಯರ್ಥಶ್ರಮವೆಂದು ಅವನ ಎಣಿಕೆ. ಆದರೆ ನೈಜ ಪರಿಸ್ಥಿತಿ ಮಾತ್ರ ಭಿನ್ನ. ಆದಿಲ್‌ಷಹ ಸಮರರಂಗವನ್ನೂ ಪ್ರವೇಶಿಸದೆ, ಬೆಳಗಾವಿಯ ಅಧಿಪತಿ ಅಸದಖಾನನ ನಾಲ್ಕುನೂರು ರಾವುತರ ಸಂರಕ್ಷಣೆಯಲ್ಲಿ ದೂರನಿಂತು, ಸಂಗ್ರಾಮದ ಪ್ರಗತಿಯನ್ನು ನಿರೀಕ್ಷಿಸುತ್ತಿದ್ದನು. ವಿಜಾಪುರಸೇನೆ ಪರಾಭವಕ್ಕೀಡಾದುದನ್ನೂ, ಸತ್ತುಳಿದವರು ದಿಕ್ಕೆಟ್ಟು ಓಡುತ್ತಿರುವುದನ್ನೂ ಗಮನಿಸಿ ಅಸದಖಾನ್ ಪಲಾಯನವನ್ನು ಬಯಸಿದನು; 'ಖಾವಂದ್! ವಿಜಯಸೇನೆಗೇ ವಿಜಯ. ನಾವು ಇಲ್ಲಿ ನಿಂತು ಅಸುನೀಗಬೇಕೇಕೆ! ಜೀವವುಳಿಸಿಕೊಂಡರೆ ಮತ್ತೊಂದು ಸೈನ್ಯ ತರಬಹುದು' ಎಂದನು. ಆದಿಲ್‌ಷಹ ಸಿದ್ಧವಾಗಿದ್ದ ಆನೆಯ ಮೇಲೆ ಕುಳಿತು, ಅಸದಖಾನನನ್ನು ಹಿಂಬಾಲಿಸಿ, ಪಲಾಯನ ಮಾಡಿದನು.

ಆದಿಲ್‌ಷಹನ ಐಶ್ವರ್ಯಭರಿತ, ಶಸ್ತ್ರಯುಕ್ತ ಶಿಬಿರವನ್ನು ಸೂರೆಗೊಳ್ಳಲು ರಾಯ ಆಣತಿಯಿತ್ತನು. ಓರ್ಮುಜ್‌ನ ಬೆಲೆಯುಳ್ಳ ಕುದುರೆಗಳು, ಆನೆಗಳು, ಫಿರಂಗಿಗಳು, ಬಂದೂಕುಗಳು, ಡೇರೆಗಳು ದೊರೆತವು. ಹೇರಿನ ಎತ್ತು ಕುದುರೆಗಳು ಲೆಕ್ಕವಿಲ್ಲದಷ್ಟು ಸಿಕ್ಕವು. ಶಿಬಿದಲ್ಲಿ ಅರಕ್ಷಕರಾಗಿ ಉಳಿದಿದ್ದ ಹೆಂಗಸರು ಮಕ್ಕಳನ್ನು ವಿಜಾಪುರಕ್ಕೆ ರಾಯ ಕಳುಹಿದನು. ಬಹುಸಂಖ್ಯಾತ ಯುದ್ಧಖೈದಿಗಳಲ್ಲಿ ವಿಜಾಪುರ ದಂಡನಾಯಕ ಸಲಬತ್‌ಖಾನ್, ಹಲವು ದಳಪತಿಗಳು ಇದ್ದರು.

ಸಲಬತ್‌ಖಾನ್ ಐದುನೂರು ಪೋರ್ಚುಗೀಸ್ ರಕ್ಷಕ ಸಮೇತನಾಗಿ ರಣಭೂಮಿಯಲ್ಲಿದ್ದವನು ವಿಜಾಪುರಸೇನೆ

ಪರಾಜಿತವಾಗಿ ಪಲಾಯನಹೊಂದತೊಡಗಿದಾಗ, ತನ್ನ ಸುತ್ತ ಸೈನಿಕರನ್ನು ಸೇರಿಸಿಕೊಂಡು ಯುದ್ಧವನ್ನು ಮುಂದುವರಿಸಲು ಅಭಿಲಾಷಿಸಿದನು. ದಂಡಾಳುಗಳೆಲ್ಲ ಸ್ವಪ್ರಾಣರಕ್ಷಣೆಯ ಕಾತುರತೆಯಲ್ಲಿ ರಣಭೂಮಿಯಿಂದ ಹಿಮ್ಮುಖವಾಗಿ ಓಡುತ್ತಿದ್ದರೇ ವಿನಹ ದಂಡನಾಯಕನ ಸಂಗಡ ನುಗ್ಗಿ ಕಾದಾಡಲು ಬಯಸುವವನೊಬ್ಬನೂ ಇಲ್ಲ. ಸಲಬತ್‌ಖಾನ್ ವಿಜಾಪುರಸಿಂಹಾಸನದ ನಿಸ್ಸೀಮ ಸೇವಕ; ಪರಾಜಿತನಾಗಿ ಜೀವಿಸುವುದಕ್ಕಿಂತ ವೀರೋಚಿತವಾದ ಮೃತ್ಯುವನ್ನಾಲಂಗಿಸುವುದೇ ಲೇಸು. ಪೋರ್ಚುಗೀಸ್ ರಕ್ಷಕರೊಂದಿಗೆ ಕನ್ನಡಸೈನ್ಯದ ನಡುವೆ ನುಗ್ಗಿದನು. ಅವನ ಮಿಂಚಿನಂತೆ ಹೊಳೆಯುತ್ತಿದ್ದ ಕೂರಾದ ಕರವಾಳದ ಎದುರುಸಿಕ್ಕಿ ಕನ್ನಡ ದಂಡಾಳುಗಳು ಖಂಡತುಂಡಾಗಿ ನೆಲಕ್ಕೊರಗಿದರು. ಅವನ ಅಮಾನುಷ ಪರಾಕ್ರಮ, ಧೀರ ಕಾರ್ಯಾಚರಣೆ ಬಹುಕಾಲ ವಿಜಯ ಸೈನ್ಯದ ನೆನಪಿನಲ್ಲುಳಿಯಿತು. ಈ ಅಲ್ಪ ಸಂಖ್ಯಾತ ಶತ್ರುಸಮೂಹ ಅಭಿಮುಖವಾದ ಕೂಡಲೆ ಕನ್ನಡದಂಡಾಳುಗಳು ಬೆದರಿ ಪಕ್ಕ ಸರಿಯತೊಡಗಿದರು. ಸಲಬತ್‌ಖಾನ್ ಕಲಿತನದಿಂದ ಬಾಣದಂತೆ ನೇರವಾಗಿ ಮುಂದೆಮುಂದೆ ನುಗ್ಗಿದನು. ಅಂಗರಕ್ಷಕ ಪರಿವೃತನಾದ ಕೃಷ್ಣದೇವರಾಯ ಇನ್ನೇನು ಸಮೀಪಗತ. ಅಂಗರಕ್ಷಕರು ಕದನಕಲಿಗಳಂತೆ ಖಡ್ಗಗಳನ್ನು ಝಳಪಿಸಿದರು; ಸಲಬತ್‌ಖಾನನ ಕುದುರೆ ಗಾಯಗೊಂಡು ದಿಂಡುರುಳಿ ಬಿದ್ದಿತು. ಪೋರ್ಚುಗೀಸ್ ರಕ್ಷಕರು ಅಸಮ ಸಾಹಸದಿಂದ ಸೇನಾನಿಗೆ ಹೊಸ ಕುದುರೆಯನ್ನು ತಂದೊದಗಿಸಿದರು. ಸಲಬತ್‌ಖಾನ್ ಅಶ್ವಾರೋಹಿಯಾದನೋ ಕುರಿಗಳ ನಡುವೆ ನುಗ್ಗಿದ ತೋಳದಂತೆ ಶತ್ರುಹನನವೆಸಗಿ ಕದನಕೋಲಾಹಲನಾದನು. ಈ ವೇಳೆಗಾಗಲೆ ಸಲಬತ್‌ಖಾನ್ ಹಲವು ಘಾಯಗೊಂಡು ರಕ್ತಸ್ರಾವದಿಂದ, ದೀರ್ಘಕಾಲದ ಹೋರಾಟದಿಂದ ಅತೀವ ಶ್ರಮಗೊಂಡಿದ್ದನು. ಪೋರ್ಚುಗೀಸ್ ರಕ್ಷಕರಲ್ಲೂ ಅನೇಕಾನೇಕರು ನಿಹತರಾಗಿ, ಉಳಿದವರೂ ಬಳಲಿ ಬಸವಳಿದಿದ್ದರು. ಸುತ್ತಲೂ ಸಾಗರದ ತೆರೆಗಳಂತೆ ಉಕ್ಕುಕ್ಕಿ ಬರುತ್ತಿದ್ದ ಕರ್ಣಾಟಕ ಸೇನಾಸಮೂಹ! ಅಶ್ವಸಮೇತನಾಗಿ ಸಲಬತ್‌ಖಾನ್ ದಿಂಡುಗೆಡೆದು ಬಿದ್ದನು.

ಈ ಹೊತ್ತಿಗೆ ಅವನ ಐದುನೂರು ಪೋರ್ಚುಗೀಸ್ ರಕ್ಷಕರು ಕಡಿಖಂಡವಾಗಿ ನೆಲಕ್ಕೊರಗಿದ್ದರು. ಮೈತುಂಬ ಘಾಯಗಳಾಗಿ, ನಿರ್ಬಲವಾಗಿದ್ದ ಸಲಬತ್‌ಖಾನ್ ಕನ್ನಡ ಕಟ್ಟಾಳುಗಳಿಂದ ಬಂಧಿತ.

ಆದಿಲ್‌ಷಹನಿಗೆ ಅಮಿತ ಸೇನಾನಾಶವಾಗಿದ್ದರೆ ರಾಯನಿಗೂ ಸಾಕಷ್ಟು ಸೇನಾನಾಶವೇ! ಹದಿನಾನು ಸಾಸಿರ ಕನ್ನಡಿಗದಂಡಾಳುಗಳು ಭೂಮಿತಾಯಿಯನ್ನು ಅಪ್ಪಿದ್ದರು. ಇವರಿಗೆಲ್ಲ ಅಗ್ನಿಸಂಸ್ಕಾರ, ಅಪರಕರ್ಮಗಳನ್ನು ಸಾಂಗಗೊಳಿಸಿ, ರಾಯ ಸೇನಾಸಮೇತನಾಗಿ ರಾಯ್ಚೂರ ಬಳಿವಂದು ಮೊದಲಿನಂತೆಯೇ ಪಾಳೆಯ ಹೂಡಿದನು.

ಕನ್ನಡಸೇನೆ ವಿಜಾಪುರ ಸೇನೆಯನ್ನು ಸಂಧಿಸಲೆಂದು ರಾಯ್ಚೂರ ಬಳಿಯಿಂದ ನಿರ್ಗಮಿಸಿದಾಗ, ರಾಯ್ಚೂರ ದುರ್ಗದ್ವಾರವೂ ತೆರೆಯಿತು. ರಾಯ್ಚೂರ ದಳಪತಿ ಕಿಂಚಿತ್ ಸೈನ್ಯಸಮೇತನಾಗಿ ಹೊರಟು ಕನ್ನಡಸೇನೆಗೆ ಅನತಿ ದೂರದಲ್ಲಿ ಕೆಲದಲ್ಲೇ ಸಾಗಿದನು. ಈ ರಹಸ್ಯಗಮನದ ಉದ್ದೇಶವೇನೋ ಯಾರಿಗೂ ಅರಿಯದು. ಕನ್ನಡಸೇನೆ ನಿಂತಲ್ಲಿ ಇದೂ ನಿಲ್ಲುತ್ತಿತ್ತು. ರಾಯ್ಚೂರ ದಳಪತಿ ಕನ್ನಡಸೇನೆಯ ನಡುವೆ ಗುಪ್ತಚಾರರನ್ನು ಕಳುಹಿ, ಅದರ ಚಲನವಲನಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದನು. ವಿಜಯಸೇನೆಗೆ ತಾವು ಬಹು ಸಮೀಪವಾಗಿದ್ದು, ಯಾವ ಗಳಿಗೆಗೆ ಕನ್ನಡ ಕಟ್ಟಾಳುಗಳು ತಮ್ಮ ಮೇಲೆ ಮುಗಿದುಬಿದ್ದಾರೋ ಎಂದು ಕಣ್ಣೆಲ್ಲ ಕಾವಲಾಗಿ, ನಿಶೆಯೂ ಶಸ್ತ್ರಸನ್ನದ್ಧರಾಗಿ ಇರುತಿದ್ದರು. ವಿಜಾಪುರಸೇನೆ ಪರಾಜಿತವಾದೊಡನೆಯೆ ರಾಯ್ಚೂರ ದಳಪತಿ ಸ್ವರಕ್ಷಣೆಗಾಗಿ ಶೀಘ್ರವಾಗಿ ನಿರ್ಗಮಿಸಿ ರಾಯ್ಚೂರ ದ್ವಾರಗತನಾದನು; ದುರ್ಗಾಧಿಪತ್ಯಕ್ಕಾಗಿ ಹಾತೊರೆಯುತ್ತಿದ್ದ ಉಪದಳಪತಿಗೆ ಸನ್ನಿವೇಶದ ಸಂಪೂರ್ಣ ಲಾಭಪಡೆಯುವ ಅಭಿಲಾಷೆ. ಒಡೆಯ ಆದಿಲ್‌ಷಹ ಸೋತು ದಿಕ್ಕೆಟ್ಟು ಓಡಿಹೋಗಿದಾನೆ; ದಳಪತಿ ರಕ್ಷಣೆಗಾಗಿ ಪ್ರವೇಶನವನ್ನು ಕೋರಿ, ದ್ವಾರದಲ್ಲಿ ಕಾದು ನಿಂತಿದಾನೆ. ದಳಪತಿಯನ್ನು ಹೊರಗೇ ಉಳಿಸಿದರೆ ತಾನೇ ದುರ್ಗಾಧಿಪತಿ; ಅಷ್ಟೇಕೆ ದುರ್ಗ ಸ್ವಂತದ ಆಸ್ತಿಯಾಗುವುದು. ದಳಪತಿಗಾಗಿ ದ್ವಾರವನ್ನು ತೆರೆಯದೆ, ಪ್ರವೇಶವನ್ನು

ನಿರಾಕರಿಸಿದನು. ಕನ್ನಡ ಸೈನ್ಯದ ಕೈಸಿಕ್ಕು ನುಚ್ಚುನೂರಾಗುವುದರ ಬದಲು ಪ್ರಾಣರಕ್ಷಣೆಗಾಗಿ ದಳಪತಿ ನದಿಯನ್ನು ಬೇರೊಂದುಕಡೆ ದಾಟಿ, ದೂರ ಸಾಗಿಹೋದನು. ಅನುಭವಿ ದಳಪತಿಯ ನಿರ್ಗಮನದಿಂದ ದುರ್ಗ ತುಸು ದುರ್ಬಲ; ವಿಜಯಶಿಬಿರಕ್ಕೆ ಫಿಗ್ಯೆರೆಡೋನ ಆಗಮನದಿಂದ ದುರ್ಗ ದುರ್ಬಲತರ.

ಫಿಗ್ಯೆರೆಡೊ ಪೋರ್ಚುಗೀಸ್ ಅಶ್ವವ್ಯಾಪಾರಿ. ರಾಯನಿಗೆ ಕುದುರೆಗಳನ್ನು ಮಾರಲೆಂದು ವಿಜಯನಗರಕ್ಕೆ ಬಂದವನು ರಾಯ ರಾಯ್ಚೂರ ಮುತ್ತಿಗೆಯಲ್ಲಿ ಉದ್ಯುಕ್ತನಾಗಿರುವ ಸುದ್ದಿ ತಿಳಿದು, ಪೋರ್ಚುಗೀಸ್ ತುಪಾಕಿ ಸಿಪಾಯಿಗಳನ್ನೊಡಗೊಂಡು ಇಲ್ಲಿಗೇ ಧಾವಿಸಿದನು. ಇವನ ಆಗಮನದಿಂದ ರಾಯ ಸಂತುಷ್ಟ. ವಿಜಾಪುರ ಪಾಳೆಯದಿಂದ ಕಿತ್ತುತಂದ ಡೇರೆಗಳಲ್ಲಿ ಕೆಲವನ್ನು ಫಿಗ್ಯೆರೆಡೋಗೆ ಕೊಡಲಾಯ್ತು. ರಾಯನ ಬಿಡಾರಕ್ಕೆ ಸನಿಹವೇ ಫಿಗ್ಯೆರೆಡೊ ಹಾಗು ಸಂಗಡಿಗರ ಡೇರೆಗಳು. ವ್ಯವಹಾರಚತುರ, ಯುದ್ಧವೀರ, ವಿದೇಶಪ್ರವಾಸಿಯ ಸಹವಾಸ ರಾಯನಿಗೆ ಅಕ್ಕರೆ.

ಕೃಷ್ಣದೇವರಾಯ ಬಿಡಾರದಲ್ಲಿ ಫಿಗ್ಯೆರೆಡೊನೊಡನೆ ಚದುರಂಗವಾಡುತ್ತ ಕುಳಿತಿದ್ದನು.

'ಷಹ'

'ಎಲ್ಲಿ? ಎಲ್ಲಿ?' ಫಿಗ್ಯೆರೆಡೊ ಬೆಚ್ಚಿದ; ಈ ವ್ಯವಹಾರಚತುರ ವಿಜಯನಗರಕ್ಕೆ ಹಲವು ವರ್ಷಗಳಿಂದ ಬರುತ್ತಿದ್ದವನು ಕನ್ನಡವನ್ನು ಚೊಕ್ಕವಾಗಿ ಕಲಿತಿದ್ದ.



**ರಾಯ್ಚೂರ ರಣಭೂಮಿ**

'ಇಂದೇನು, ಎಂದೂ ಇಲ್ಲದ ಮಂಕು! ಇಷ್ಟು ಸುಲಭವಾಗಿ ಸೋತೆಯಲ್ಲ!'

'ತಲೆ ಆಟದ ಹೋರಾಟದಲ್ಲಿ ಮಗ್ನವಾಗಿಲ್ಲ. ನಿಜವಾಗಿ ನಡೆಯುತ್ತಿರುವ ರಾಯ್ಚೂರಮುತ್ತಿಗೆಯನ್ನು ಕುರಿತು ಆಲೋಚಿಸುತ್ತಿದೆ. ನಾಳೆ ನಾನೂ ಯುದ್ಧದಲ್ಲಿ ಭಾಗವಹಿಸುವೆ. ರಾಯ್ಚೂರುಕೋಟೆಯ ಬದಿಗೆ ಹೋಗುವೆ.'

'ನಮ್ಮ ಬಂಟರು ಸರ್ವ ಸಾಹಸದಲ್ಲಿ ತೊಡಗಿದಾರೆ. ವಿದೇಶೀವ್ಯಾಪಾರಿಯ ಪ್ರಾಣವನ್ನು ನಿರರ್ಥಕವಾಗಿ ಅಪಾಯಕ್ಕೀಡುಮಾಡಲು ನಾನೊಪ್ಪೆ.'

'ಸಮರನಿರತನಾಗಿರುವುದೇ ಪೋರ್ಚುಗೀಸನ ಉದ್ಯೋಗ. ಇಂಥಾ ಚರಿತ್ರಾರ್ಹ ಸಮರದಲ್ಲಿ ಪಾಲ್ಗೊಂಡು ಸಾಮರ್ಥ್ಯ ಪ್ರದರ್ಶನಮಾಡ ಬಯಸಿದ್ದೇನೆ. ಸಮರಮುಖಕ್ಕೆನುಗ್ಗಲು ನನಗಾಣತಿಯಿತ್ತರೆ ಅದೇ ಮಹೋಪಕಾರ.'

ಫಿಗ್ವೈರೆಡೋನ ಬೇಡಿಕೆಯನ್ನು ರಾಯ ನಿರಾಕರಿಸದಾದ. ಹಿಂಬಾಲಕರಾದ ಪೋರ್ಚುಗೀಸ್ ತುಪಾಕಿಸಿಪಾಯಿಗಳೊಂದಿಗೆ ಫಿಗ್ವೈರೆಡೊ ರಾಯ್ಚೂರುಕೋಟೆಯ ಬದಿಗೆ ಹೋಗಲು ಸಿದ್ಧನಾದ. ಉದ್ದಕ್ಕೂ ಬೆಳೆದಿದ್ದ ಪೊದೆ, ಗಿಡಗಳ ಮರೆಯಲ್ಲೇ ಸಾಧ್ಯವಾದಷ್ಟು ನಡೆದು, ಕೋಟೆಯ ಬುಡ ಸೇರಿದ. ದುರ್ಗಭಿತ್ತಿಯ ಮೇಲೆ ಶತ್ರುಭಟರು ನಿರ್ಭಯರಾಗಿ ನಿಂತು, ನೆಲದಮೇಲಿದ್ದ ಕನ್ನಡಸೇನೆಯ ಮೇಲೆ ಕಾರ್ಯಾಚರಣೆ ಮಾಡುತ್ತ, ಉಗ್ರ ಉಪಟಳ ಕೊಡುತ್ತಿದ್ದರು. ಬಂಡೆಗಳನ್ನು ಉರುಳಿಸುವುದೇನು! ಕಾದೆಣ್ಣೆ ಕಾರುಬೊಗ್ಗುಗಳನ್ನು ಸುರಿಯುವುದೇನು! ಕನ್ನಡಕಟ್ಟಾಳುಗಳು ಎಷ್ಟೇ ಬಲಿಷ್ಠರಾಗಿದ್ದರೂ ಪರಾಕ್ರಮಿಗಳಾಗಿದ್ದರೂ ಇಂಥ ವಿರೋಧವನ್ನು ಪ್ರತಿಭಟಿಸುವುದು ಹೇಗೆ! ಕೋಟೆಯ ಗೋಡೆಯನ್ನು ಮುಟ್ಟುವುದೇ ದುಸ್ತರ; ಗೋಡೆಗೆ ದೂರ ನಿಂತೇ ನಿಂತಿರುವುದು. ಮುತ್ತಿಗೆ ಹಲವು ತಿಂಗಳಿಂದ ಅರ್ಥಶೂನ್ಯವಾಗಿತ್ತು. ಕನ್ನಡ ಕಟ್ಟಾಳುಗಳು ಚಾತುರ್ಯ, ಸಾಹಸಗಳಿಂದ ದುರ್ಗಭಿತ್ತಿಯನ್ನು ತಲುಪಿ ಭಿತ್ತಿಯ ಶಿಲೆಗಳನ್ನು ಕಿತ್ತಿದ್ದರೇನೋ ಹೌದು; ಆದರೆ ಇದು ಅಪರೂಪ.

ನಿರ್ಭೀತಿಯಿಂದ ದುರ್ಗಭಿತ್ತಿಯ ಮೇಲ್ನಿಂತು ಉಪಹತಿಯೆಸಗುತ್ತಿದ್ದ ರಾಯ್ಚೂರ ಸೈನಿಕರಲ್ಲಿ ಒಬ್ಬ ಇದ್ದಕ್ಕಿದ್ದಂತೆ ಕೌಂಗಿನ ತುದಿಯಿಂದ ಉದುರಿದ ಕಾಯಿಯಂತೆ ದುರ್ಗಭಿತ್ತಿಯ ಪಾದಕ್ಕೆ ಬಿದ್ದನು. ಉಭಯ ಪಕ್ಷಗಳಿಗೂ ಆಶ್ಚರ್ಯ; ಪೌಳಿಯ ಮೇಲ್ನಿಂತು ಅವನಿಗೆ ತಲೆ ತಿರುಗಿತೋ! ಅಗೋ, ಮತ್ತೊಬ್ಬ ಬಿದ್ದ. ಢ್ಹಂ! ಮಗದೊಬ್ಬ. ಭಿತ್ತಿಯ ಮೇಲ್ನಿಂತ ಭಟರು ಒಬ್ಬೊಬ್ಬರಾಗಿ ಕೋಟೆಯ ಹೊರಗೆ ಅಥವ ಒಳಗೆ ಪಟಪಟ ಉರುಳತೊಡಗಿದರು. ಇದೇನು ಯಮಬಾಣವೆಂದು ಹೆದರಿ, ಮಿಕ್ಕವರೆಲ್ಲ ಮೊದಲ ಪೌಳಿಯನ್ನು ಬಿಟ್ಟು ಓಡಿಹೋಗಿ, ಒಳ ಪ್ರಾಕಾರಕ್ಕೆ ಸೇರಿಕೊಂಡರು.

ಕೋಟೆಯ ಗೋಡೆಯಮೇಲೆ ವ್ಯೂಹಿಸಿದ್ದ ರಾಯ್ಚೂರ ಸೈನಿಕರ ಕಡೆ ತುಪಾಕಿ ಹಾರಿಸಲು ಫಿಗ್ಯೆರೆಡೊ ತನ್ನ ಸಂಗಡಿಗರಿಗೆ ಆಣತಿಸಿದ್ದ. ತುಪಾಕಿ ಅಂದು ಹಿಂದೂಸ್ಥಾನಕ್ಕೆ ಹೊಸತು. ಎಂಥ ರೀತಿಯದೋ ಏಟು ಪಟಪಟನೆ ಬೀಳತೊಡಗಿ ತಮ್ಮ ಸೈನಿಕರು ಪಟಪಟನೆ ಸತ್ತು ಬೀಳುತ್ತಿರಲು ಮಿಕ್ಕವರೆಲ್ಲ ಹೆದರಿ ಒಳಗೋಡಿದರು. ದುರ್ಗಭಿತ್ತಿ ನಿಸ್ಸೈನಿಕವಾಗಲು ಯಾವ ಉಪಟಳವೂ ಇಲ್ಲದೆ ಕನ್ನಡದಂಡಾಳುಗಳು ಕೋಟೆಯ ಗೋಡೆಯನ್ನು ತಲುಪಿದರು; ಕಲ್ಲುಗಳನ್ನು ಕಿತ್ತು ಗೋಡೆಯನ್ನು ಸಡಿಲಿಸತೊಡಗಿದರು. ಇನ್ನೂ ಹೆಚ್ಚು ವಿಜಯಸೈನ್ಯ ಇದೇ ಕಡೆಗೆ ನುಗ್ಗಿತು. ಫಿಗ್ಯೆರೆಡೊ ಪೋರ್ಚುಗೀಸ್ ಹಿಂಬಾಲಕರೊಂದಿಗೆ ದುರ್ಗಪ್ರವೇಶ ಮಾಡಿರುವನೆಂಬ ಸುದ್ದಿ ಪಾಳೆಯವೆಲ್ಲ ಹಬ್ಬಿ, ಕೋಲಾಹಲವಾಯಿತು.

ಪರಿಸ್ಥಿತಿ ಏನೆಂಬುದು ಅರಿಯದೆ ರಾಯ್ಚೂರಿಗರೆಲ್ಲ ತಳಮಳಿಸಿದರು. ಪೋರ್ಚುಗೀಸ್ ತುಪಾಕಿ ಸಿಪಾಯಿಗಳ ನೆರವಿನಿಂದ ಕನ್ನಡದಂಡಾಳುಗಳು ಕೋಟೆಯ ಗೋಡೆಯನ್ನು ತಾಗಿ, ದುರ್ಬಲಗೊಳಿಸತೊಡಗಿರುವುದನ್ನು ತಿಳಿದು ಹೌಹಾರಿದರು. ಭಿತ್ತಿಯ ಮೇಲಣ ಫಿರಂಗಿಗಳನ್ನು ಹಾರಿಸಲಾಯ್ತು; ಆದರೆ ಗೋಡೆಗೆ ಅಂಟಿಕೊಂಡು ನಿಂತಿದ್ದ

ಕನ್ನಡದಂಡಾಳುಗಳಿಗೆ ಫಿರಂಗಿಯೇಟು ಏನೂ ಮಾಡದು. ಸನಿಕೆ, ಪಿಕಾಸಿ, ಹಾರೆಗೋಲುಗಳಿಂದ ಕನ್ನಡದಂಡಾಳುಗಳು ಕಲ್ಲುಗಳನ್ನು ಕೀಳುತ್ತ ಕೋಟೆಯ ಗೋಡೆಯನ್ನು ಶಿಥಿಲಗೊಳಿಸಿದರು.

ಪೌರರ, ರಕ್ಷಕರ ಭೀತಿಯನ್ನು ನೋಡಿ ದುರ್ಗಾಧಿಪತಿ ಕಂಗೆಟ್ಟನು. ಅವರನ್ನೆಲ್ಲ ಹುರಿದುಂಬಿಸುತ್ತ ಪೌಳಿಯ ಬಳಿ ಕರೆದೊಯ್ಯಲು ಹೆಣಗಿದನು. ಕೆಲವರಾದರೂ ಅವನನ್ನು ಒಡಗೊಂಡು ಮುನ್ನಡೆದರು; ಆದರೆ ಪೌಳಿಯನ್ನು ಏರದಾದರು. ಪೋರ್ಚುಗೀಸ್ ತುಪಾಕಿ ಸಿಪಾಯಿಗಳು ನಿಂತಿದ್ದುದು ಇದೇ ದೆಸೆ; ತಾವು ಪೌಳಿಯನ್ನು ಹತ್ತಿದುದೇ ಆದರೆ ಕ್ಷಣಾರ್ಧದಲ್ಲಿ ತಮ್ಮ ಪ್ರಾಣ ಅಳಿಯುವುದು ಖಂಡಿತ. ಆದರೆ ಪರಿಸ್ಥಿತಿಯನ್ನು ಸ್ವತಃ ಪರೀಕ್ಷಿಸಲು ದುರ್ಗಾಧಿಪತಿ ಮುಂದಾಗಿ ಪೌಳಿಯಮೇಲೆ ಮುಖವಿಟ್ಟನು. ಬಹು ಪೊತ್ತಿನಿಂದ ಬಲಿಬೀಳದೆ ತುಪಾಕಿಹಿಡಿದು ಚಡಪಡಿಸುತ್ತಿದ್ದ ಫಿಗ್ವೈರೆಡೋಗೆ ಈ ಮುಖ ಕಂಡಿತು.

ಢ್ಝಂ!

ಗುಂಡು ದುರ್ಗಾಧಿಪತಿಯ ಹಣೆಸೀಳಿತು. ನೆತ್ತರು ಚಿಮ್ಮುತ್ತ ನೆಲಕ್ಕೊರಗಿದನು. ನಾಯಕನ ಅವಸಾನದಿಂದ ರಾಯ್ತೂರಿಗರು ದುಃಖಿತರು. ರಾಯ್ತೂರ ರಕ್ಷಣೆಯೇ ಮರೆತು ಹೋದಂತೆ ಪೌಳಿಯನ್ನು ಬಿಟ್ಟು ಒಳನಡೆದರು. ಪೌಳಿ ಎಲ್ಲ ದಿಕ್ಕುಗಳಲ್ಲೂ ಸಂಪೂರ್ಣ ಅರಕ್ಷಿತವಾದುದನ್ನು ನಿರೀಕ್ಷಿಸಿ ವಿಜಯಸೈನಿಕರು ಆ ದಿನದ ಹೋರಾಟವನ್ನೂ, ಕೋಟೆಗೋಡೆಯ ಕಲ್ಲು ಕೀಳುವುದನ್ನೂ ನಿಲ್ಲಿಸಿ, ಪಾಳೆಯಕ್ಕೆ ಹಿಂತಿರುಗಿದರು.

ಶುಭ್ರ ಪ್ರಭಾತ. ಅಲ್ಲಿಲ್ಲಿ ಮುರುಕುಗೊಂಡ ದುರ್ಗಭಿತ್ತಿ ಗಾಯಪಡೆದ ಯೋಧನಂತೆ ವ್ಯಗ್ರವಾಗಿತ್ತು. ಜನನಿಬಿಡ ವಿಜಯಶಿಬಿರ, ಅಲ್ಲಿಲ್ಲಿ ನೆತ್ತರಿಂದ ಕರೆಗಟ್ಟಿದ ನೆಲ, ಅತ್ತಿತ್ತ ಸತ್ತ ಮೃಗಗಳ ಎಲುಬುಹಂದರಗಳು ಇವೆಲ್ಲ ಭೀಕರವಾಗಿ ಭೀಷಣವಾಗಿ ಇರಬೇಕಾಗಿದ್ದವು ಹೊಂಬಿಸಲಲ್ಲಿ ರುದ್ರಮನೋಹರ. ತುಪಾಕಿಸಿಪಾಯಿಗಳು ಪ್ರತಿಭಟಿಸಿ ನಿಂತೆಡೆ

ಮಾತ್ರವಲ್ಲದೆ ದುರ್ಗಭಿತ್ತಿಯ ಯಾವ ದೆಸೆಯೂ ಒಂದೂ ಶತ್ರುಮುಖ ಇನ್ನೂ ಕಾಣದೆ ಕನ್ನಡದಂಡಾಳುಗಳಿಗೆಲ್ಲ ಅಚ್ಚರಿ. ಏನು ಪಾಡೋ, ಎಂದು ವಿನೋದಗೊಂಡವರಂತೆ ಅತ್ತಿತ್ತ ನಿರುಕಿಸುತಿದ್ದರು. ಹೋ! ದುರ್ಗದ್ವಾರ ತೆರೆಯಿತು. ಶ್ವೇತವಸನಧಾರಿಗಳಾದ, ಶ್ವೇತಪತಾಕೆಯನ್ನು ಎತ್ತಿಹಿಡಿದ ಜನದ ಗುಂಪು ಹೊರಬಂತು. ಕನ್ನಡದಂಡಾಳುಗಳು ಸಮಾಧಾನದ ಉಸಿರು ತೀಡಿದರು.

ಶರಣಾಗತಿಯ ಸೂಚನೆಯಾಗಿ ಕೈಗಳನ್ನು ಮೇಲೆತ್ತಿಕೊಂಡು ರಾಯ್ಚೂರಿಗರು ತನ್ನ ಶಿಬಿರದೆಡೆ ಸಾಗಿ ಬರುತ್ತಿರುವ ಸುದ್ದಿ ರಾಯನಿಗೆ ತಿಳಿಯಿತು. ಶರಣಾಗತರನ್ನು ಗೌರವದಿಂದಲೇ ಕಾಣಬೇಕೆಂದು ಅವರನ್ನು ಎದುರುಗೊಳ್ಳಲು ರಾಯ ಸಾಳುವ ತಿಮ್ಮನನ್ನು ಕಳುಹಿದನು. ವಿಜಯಸಾಮ್ರಾಜ್ಯದ ಮಹಾ ಮಂತ್ರಿಯೇ ತಮ್ಮನ್ನು ಎದುರುಗೊಳ್ಳಲು ಬರುತ್ತಿರುವುದನ್ನು ಕಂಡು, ತಾವು ಹೂಡಿದ ಯುದ್ಧಕ್ಕೆ ಪ್ರತಿಯಾಗಿ ರಾಯ ದಯೆಯನ್ನೇ ನೀಡುವನೆಂದು ಮನಗಂಡು ರಾಯ್ಚೂರಿಗರು ಭರವಸೆಗೊಂಡರು.

ಬಿಡಾರದಲ್ಲಿ ರಾಯ ವ್ಯಾಘ್ರಚರ್ಮ ಹಾಸಿದ ಉನ್ನತ ಪೀಠದಲ್ಲಿ ಮಂಡಿಸಿದ್ದನು. ಬಿಡಾರದ ಎರಡು ಗೋಡೆಗೂ ಕತ್ತಿ, ಚಂದ್ರಹಾಸ, ಬಿಲ್ಲುಬಾಣಗಳು ನೇತಿದ್ದವು. ಎರಡು ಮೂಲೆಗಳಲ್ಲೂ ಮೂರು ಮೂರು ಈಟಿಗಳನ್ನು ಆನಿಸಿ, ನೇರ ನಿಲಿಸಲಾಗಿತ್ತು. ಬಿಡಾರದ ಕಾಪಿನವರು ರಾಯ್ಚೂರ ಪೌರರನ್ನು ಒಳಗೆ ಬಿಟ್ಟಕೂಡಲೆ, ಅವರು ದೀರ್ಘದಂಡ ನಮಸ್ಕಾರಮಾಡಿ, ಕಂಬನಿಗರೆದರು.

'ಮಹಾಪ್ರಭು ! ಕರ್ಣಾಟಕಸಾರ್ವಭೌಮನೆದುರು ನಾವು ಅರಿಯದೆ ಸೆಣೆಸಿದ ಸಮರಕ್ಕೆ ಕ್ಷಮೆಯಿರಲಿ. ನಮ್ಮೊಲವು ನಮ್ಮ ತಾಯ್ನಾಡಾದ ಕರ್ಣಾಟಕದ ಕಡೆಗೇ ಇದ್ದರೂ ಆದಿಲ್‌ಷಹನ ದಬ್ಬಾಳಿಕೆಗೆ ತುತ್ತಾಗಿ ಆ ಕಡೆಯೇ

ನಮ್ಮ ಬಲ ಮುಡಿಪಾಗಿತ್ತು. ಕರ್ಣಾಟಕಸಾರ್ವಭೌಮ ಕೃಪೆಯ ಸಾರ್ವಭೌಮನೂ ಅಹುದೆಂದು ದಯೆ ಔದಾರ್ಯಗಳ ಭಿಕ್ಷೆಗಾಗಿ ಆಗಮಿಸಿದೇವೆ.'

'ಏಳಿ, ಏಳಿ, ಪೌರರೆ! ನಾವು "ಕಠೋರಾಣಿ ವಜ್ರಾಣಿ"ಯಾದರೂ "ಮೃದೂನಿ ಕುಸುಮಾದಪಿ"ಯೂ ಹೌದು. ಸಂಗ್ರಾಮದಲ್ಲಿ ಕ್ಷತ್ರಿಯೋಚಿತ ಉಗ್ರ ಕಾರ್ಯಾಚರಣೆಯನ್ನೇ ಕೈಗೊಂಡೆವು; ಶರಣಾಗತರನ್ನು ಕುಸುಮದಂತೆ ಕಾಪಿಡುವೆವು. ನನ್ನಿಂದ, ನಮ್ಮ ದಂಡಾಳುಗಳಿಂದ ನಿಮಗೆ ಯಾವ ಭೀತಿಯೂ ಇಲ್ಲ. ಶರಣಾಗತರಾದ ಮೇಲೆ ನಮ್ಮ ಪ್ರಜೆಗಳೇ ಆದಿರಿ. ನಿರ್ಭಯರಾಗಿ ನಿಮ್ಮ ಮನೆಗಳಿಗೆ ಮರಳಿ. ನಿಮ್ಮ ತನುಧನಗಳ ಸಂಪೂರ್ಣ ಸಂರಕ್ಷಣೆಯ ಹೊಣೆ ನಮ್ಮದೇ. ನಾಳೆ ನಮಗೆ ಪುರಪ್ರವೇಶ.'

ಎದ್ದು ನಿಂತಿದ್ದ ರಾಯ್ಚೂರಿಗರು ಪುನಃ ಪ್ರಣಮಿಸಿ, ಹಿಗ್ಗಿ ಹಿಂದೆರಳಿದರು. ರಾಯನ ಆಣತಿಯಂತೆ ಕುಮಾರವೀರಯ್ಯ ನಗರವನ್ನು ದಳಸಹಿತ ಪ್ರವೇಶಿಸಿ, ರಕ್ಷಣಾ ಸ್ಥಳಗಳಲ್ಲೆಲ್ಲ ಕನ್ನಡ ಬಂಟರನ್ನು ನಿಲ್ಲಿಸಿ, ರಾಯ್ಚೂರನ್ನು ಸ್ವಾಧೀನಪಡಿಸಿಕೊಂಡನು.

ಮರು ಮುಂಜಾವು, ರಾಯ ಪೂಜಾ ವಿಧಿಗಳನ್ನು ಪೂರಯಿಸಿದನು. ಸಾಳುವ ತಿಮ್ಮ, ದಳಪತಿಗಳು, ಅಂಗರಕ್ಷಕ ಪಡೆ ಇವನ್ನೊಡಗೊಂಡು ರಾಯ್ಚೂರು ದುರ್ಗವನ್ನು ವಿಜೃಂಭಣೆಯಿಂದ ಪ್ರವೇಶಿಸಿದನು. ಮಂಗಳವಾದ್ಯಗಳು ಮೊಳಗುತ್ತಿದ್ದವು, ಪುರ ತಳಿರುತೋರಣಗಳಿಂದ ಅಲಂಕೃತವಾಗಿತ್ತು. ರಾಯನ ಬರವನ್ನು ನಿರೀಕ್ಷಿಸುತ್ತ ರಾಯ್ಚೂರಿಗರು ಬೀದಿಯ ಇಕ್ಕೆಲಗಳಲ್ಲೂ ನಿಂತಿದ್ದವರು 'ಕರ್ಣಾಟಕಸಾಮ್ರಾಜ್ಯಕ್ಕೆ ವಿಜಯವಾಗಲಿ' 'ಕರ್ಣಾಟಕ ಸಾರ್ವಭೌಮನಿಗೆ ವಿಜಯವಾಗಲಿ' ಎಂದು ಅಡಿಗಡಿಗೆ ಉದ್ಘೋಷಿಸಿದರು. ತಮ್ಮ ರಕ್ಷಣೆಗಾಗಿ ತಕ್ಕಂಥ ಅರಸನನ್ನು ಇಷ್ಟು ಕಾಲದ ಮೇಲಾದರೂ ಕಳುಹಿದುದಕ್ಕೆ ದೇವರಿಗೆ ವಂದನೆಗಳನ್ನು ಅರ್ಪಿಸಿದರು.

ರಾಯ ಪರಿವಾರ ಸಮೇತನಾಗಿ ಒಳಕೋಟೆಯನ್ನು ಪ್ರವೇಶಿಸಿದನು. ಮಹಾನವಮಿಯ ದಿಬ್ಬದ ಮೇಲೆ ಇಟ್ಟದ್ದ ದಂತಪೀಠದಲ್ಲಿ ಆಸೀನನಾಗಿ ಪುರಪ್ರಮುಖರಿಗೆಲ್ಲ ಕರೆಕಳುಹಿದನು. ಮತ್ತೇನು ವಿಪತ್ತು ಬಂತೋ, ಎಂದು ಅವರೆಲ್ಲ ಬೆದರಿ ನಡುನಡುಗುತ್ತ ಬಂದು ಪ್ರಣಮಿಸಿದರು. ಭಯದಿಂದ ಉದ್ವಿಗ್ನವಾದ ಅವರ ಮುಖಗಳನ್ನು ನೋಡಿ ರಾಯನಿಗೆ ನಗೆ.

'ಭಯವೇಕೆ, ನನ್ನ ಪ್ರಜೆಗಳೆ. ಭೀತಿಯಿಂದ ನಿರ್ಮುಕ್ತರಾಗಿ, ಎಂದು ಆಶ್ವಾಸನವೀಯಲೆಂದೇ ನಿಮ್ಮನ್ನು ಕರೆಕಳುಹಿದುದು. ನಿಮ್ಮ ಧನ ಆಸ್ತಿಯೆಲ್ಲ ನಿಮ್ಮದೇ. ನಾವು ಬಂದುದು ನಿಮ್ಮನ್ನು ಕಾಪಿಡಲೆಂದು, ಗೋಳಾಡಿಸಲೆಂದಲ್ಲ. ಕರ್ಣಾಟಕಸಾಮ್ರಾಜ್ಯದ ಆಶ್ರಯದಲ್ಲಿ ಸುಖವಾಗಿ ಇರುವೆವೆಂದು ಭಾವಿಸುವವರು ಅವಶ್ಯವಾಗಿ ಇಲ್ಲಿರಲಿ; ವಿಜಾಪುರದ ಆಶ್ರಯವೇ ಹಿತವೆಂದು ಪರಿಗಣಿಸುವವರು ತಮ್ಮ ಸಮಸ್ತ ಐಶ್ವರ್ಯದೊಂದಿಗೆ ದುರ್ಗದಿಂದ ನಿರ್ಗಮಿಸಲು ನನ್ನ ಅಡ್ಡಿಯಿಲ್ಲ. ಕರ್ಣಾಟಕಛತ್ರದಡಿಯಲ್ಲಿ ರಾಯ್ಚೂರಿಗರು ಸುಖಸಂಪನ್ನವಾಗಿರುವರೆಂಬ ಹಂಬಲದಿಂದ ನಾವು ಇಲ್ಲಿಯವರೆಗೆ ಬಂದುದಾಯ್ತು; ನಮ್ಮ ನಿರೀಕ್ಷೆಯಲ್ಲಿ ಅನುಕಂಪವಿಲ್ಲದವರು ಅವರ ಅಭಿಪ್ರಾಯಾನುಸಾರ ವರ್ತಿಸಲು ನಾವು ನಿರಾಕರಿಸುವುದೇಕೆ!'

ಕೃಷ್ಣದೇವರಾಯ ಮಾತು ನಿಲ್ಲಿಸಿದೊಡನೆಯೆ ಪುರಪ್ರಮುಖರು 'ಕರ್ಣಾಟಕಸಾರ್ವಭೌಮನಿಗೆ ವಿಜಯವಾಗಲಿ' ಎಂದು ಘೋಷಿಸಿದರು; ಹರ್ಷಪುಲಕಿತರಾಗಿ ತೋಳ್‌ಗಳನ್ನು ಬಾನ್ಗೆತ್ತಿ ದೀರ್ಘದಂಡ ನಮಸ್ಕಾರಮಾಡಿ, ಇಂಥ ದಯಾವರ್ತನೆಗಾಗಿ ಆನಂದಪ್ರದರ್ಶನ ಮಾಡಿದರು.

ಕೆಳಕೋಟೆಯಿಂದ ಪೌರರಿಬ್ಬರು ಧಾವಿಸಿ ಬಂದರು

'ಪ್ರಭು ವಿಜಯಸೈನಿಕರು ಪಟ್ಟಣವನ್ನು ಸೂರೆಗೊಳ್ಳುತ್ತಿದ್ದಾರೆ. ಜನ ಭಯಭೀತರಾಗಿ ತಲ್ಲಣಿಸಿದಾರೆ'

‘ ಪ್ರಭು ತಮ್ಮ ಸನ್ನಿಧಾನದಲ್ಲೇ ಹೀಗಾದರೆ, ತಮ್ಮ ನಿರ್ಗಮನದ ನಂತರ ಇನ್ನಾವ ಕೇಡು ಒದಗಲಾರದು ! ’

ರಾಯ ನಾಯಕರೀರ್ವರನ್ನು ಕಳುಹಿ, ತಮ್ಮ ದಂಡಾಳುಗಳು ಪಟ್ಟಣವನ್ನು ಸೂರೆಗೊಳ್ಳುವುದನ್ನು ನಿಲಿಸಲು ಆಣತಿಸಿದನು. ಕೊಳ್ಳೆಯಾದ ವಸ್ತುಗಳನ್ನೆಲ್ಲ ಆಯಾ ಒಡೆಯನಿಗೆ ಹಿಂದಿರುಗಿಸಲಾಯಿತು. ಈ ನಂತರವೂ ಕೊಳ್ಳೆ ಹೊಡೆದ ದಂಡಾಳುಗಳಿಗೆ ರಾಯ ಉಗ್ರ ಶಿಕ್ಷೆ ವಿಧಿಸಿದನು.

ವಿಜಾಪುರದ ಪ್ರಬಲ ಸುಲ್ತಾನನ ಪರಾಭವದ ವೃತ್ತಾಂತ ಹಿಂದೂಸ್ಥಾನದಲ್ಲೆಲ್ಲ ಪಸರಿಸಿ, ಕರ್ಣಾಟಕ ಸಾರ್ವಭೌಮನ ಕೀರ್ತಿ ವರ್ಧಿಸಿತು. ಆದಿಲ್‌ಷಹನ ಶತ್ರುಗಳಾದ ದಖನ್ ಸುಲ್ತಾನರು ಈ ಅಪಜಯದಿಂದ ಸಂತುಷ್ಟರಾದರೂ ತಮ್ಮ ನೆರೆಯವನಿಗಾದ ದುರ್ಗತಿ ತಮಗೂ ಬಂದೀತೆಂದು ದಿಗಿಲುಗೊಂಡರು. ತಮ್ಮ ತಮ್ಮ ರಾಯಭಾರಿಗಳನ್ನು ರಾಯನೆಡೆ ಕಳುಹಿದರು. ರಾಯಭಾರಿಗಳು ಬಂದಾಗ ರಾಯನಿನ್ನೂ ರಾಯ್ಚೂರು ದುರ್ಗದಲ್ಲೇ ಉಪಸ್ಥಿತ. ರಾಯ್ಚೂರಿನಂಥ ಬಲಿಷ್ಠ ದುರ್ಗವನ್ನು ಆಕ್ರಮಿಸಿದ ರಾಯನ ಸಿಂಹವಿಕ್ರಮಕ್ಕೆ ರಾಯಭಾರಿಗಳು ಅಚ್ಚರಿಪಟ್ಟರು. ವಿಜಯಸೈನ್ಯದ ಅಗಾಧತೆಯನ್ನೂ ಶಿಸ್ತನ್ನೂ ನೋಡಿದಾಗ ಅವರ ಅಚ್ಚರಿ ಮೇರೆ ಮೀರಿತು. ಆಣತಿಪಡೆದು, ರಾಯನ ಸಮ್ಮುಖಕ್ಕೆ ಆಗಮಿಸಿ, ತಮ್ಮ ತಮ್ಮ ಸುಲ್ತಾನರು ಕಳುಹಿದ್ದ ಓಲೆಗಳನ್ನು ಅರ್ಪಿಸಿದರು. ಆಯೆಲ್ಲ ಓಲೆಗಳ ಅಭಿಪ್ರಾಯ ಹೀಗೆ–

ಆದಿಲ್‌ಷಹನ ಪರಾಜಯದಿಂದಲೆ ರಾಯ ಸಂತೃಪ್ತನಾಗಿ, ಸಂಗ್ರಾಮವನ್ನು ನಿಲ್ಲಿಸಬೇಕು. ಆದಿಲ್‌ಷಹನಿಂದ ರಾಯ ಕಸಿದುಕೊಂಡಿದ್ದುದನ್ನೆಲ್ಲ ಅವನಿಗೆ ಹಿಂದಿರುಗಿಸುವ ಕೃಪೆಮಾಡಬೇಕು. ಹೀಗೆ ಮಾಡಿದುದಾದರೆ ತಾವೆಲ್ಲ ರಾಯನ ಆಜ್ಞೆಗಳನ್ನು ಶಿರಸಾ ವಹಿಸುತ್ತೇವೆ. ಆದಿಲ್‌ಷಹನದ್ದನ್ನೆಲ್ಲ ಹಿಂದಿರುಗಿಸದಿದ್ದರೆ ಆದಿಲ್‌ಷಹನಿಗೆ ನೆರವು ನೀಡಿ, ರಾಯನ ಮೇಲೆ ಯುದ್ಧ ಹೂಡಿ, ಹಿಂದಿರುಗಿಸಿಕೊಳ್ಳಬೇಕಾಗುವುದು.

ಆನೆಗೆ ಸೊಳ್ಳೆ ಕಚ್ಚುವೆನೆಂದಂತಾಯ್ತು ಈ ಬೆದರಿಕೆ. ನಾಲ್ವರು ಸುಲ್ತಾನರಿಗೂ ಪ್ರತ್ಯುತ್ತರವಾಗಿ ರಾಯ ಒಂದೇ ಓಲೆಯನ್ನು ಕಳುಹಿದನು –

'ಸುಲ್ತಾನರೆ! ನಿಮ್ಮ ಓಲೆಗಳಿಗಾಗಿ ವಂದನೆಗಳು. ಆದಿಲ್‌ಷಹನಿಗೆ ನಾವು ಮಾಡಿದ ಶಿಕ್ಷೆಯೂ, ಅವನಿಂದ ನಾವು ಕಸಿದುಕೊಂಡುದೂ ಅವನಿಗೆ ತಕ್ಕ ಪ್ರಾಯಶ್ಚಿತ್ತ. ನಾವು ಅವನಿಂದ ಕಸಿದುಕೊಂಡುದನ್ನೆಲ್ಲ ಹಿಂದಿರುಗಿಸಬೇಕೆನ್ನುವುದು ಅಸಮಂಜಸ; ಹಾಗೆ ಮಾಡಲು ನಾವು ಸಿದ್ಧರೂ ಇಲ್ಲ. ನಿಮ್ಮ ಮಾತಿನಂತೆ ನಾ ನಡೆದುಕೊಳ್ಳದಿದ್ದರೆ ಆದಿಲ್‌ಷಹನಿಗೆ ನೆರವಾಗಿ ವಿಜಯನಗರಕ್ಕೆ ಬರುವುದಾಗಿ ತಿಳುಹಿದ್ದೀರಿ. ತಾವು ಅಷ್ಟೊಂದು ಶ್ರಮ ತೆಗೆದುಕೊಳ್ಳಬೇಕಾಗಿಲ್ಲ. ನಿಮ್ಮ ಸೀಮೆಯಲ್ಲಿ ನನ್ನನ್ನು ಎದುರುಗೊಳ್ಳುವ ಧೈರ್ಯ ನಿಮಗಿದ್ದರೆ ನಾನೇ ಬಂದು ನಿಮ್ಮನ್ನು ಕಾಣುವೆ.'

ರಾಯ ರಾಯಭಾರಿಗಳಿಗೆಲ್ಲ ಉಚಿತವಾದ ಉಡಿಗೆ ತೊಡಿಗೆ ಆಭರಣಗಳ ಬಹುಮಾನವಿತ್ತು ಕಳುಹಿಸಿಕೊಟ್ಟ.

ರಾಯ ರಾಯ್ಚೂರಿನಲ್ಲಿ ಇನ್ನೂ ಕೆಲವು ದಿನ ನಿಂತು, ಆ ದುರ್ಗದ ಆಡಳಿತಕ್ಕಾಗಿ ಎಲ್ಲ ಏರ್ಪಾಟುಗಳನ್ನೂ ಮುಗಿಸಿದ. ಅಲ್ಲಲ್ಲಿ ಒಡಕುಗೊಂಡಿದ್ದ ಕೋಟೆಯಗೋಡೆಯನ್ನು ಸರಿಮಾಡಿಸಿಯಾಯ್ತು. ದುರ್ಗರಕ್ಷಣೆಗಾಗಿ ಸಾಕಷ್ಟು ಸೇನೆಯನ್ನು ನೇಮಿಸಿಯಾಯ್ತು. ಸ್ವರಾಜಧಾನಿಯನ್ನು ಕುರಿತು ಸೈನ್ಯಸಮೇತನಾಗಿ ಪಯಣ ಬೆಳೆಸಿದ. ದೀರ್ಘಕಾಲದಿಂದ ಪರಾಕ್ರಾಂತವಾಗಿದ್ದ ರಾಯ್ಚೂರು ದುರ್ಗವನ್ನು ಪುನರ್ವಶಪಡಿಸಿಕೊಂಡುದು, ಪ್ರಬಲ ಆದಿಲ್‌ಷಹನನ್ನು ಪರಾಭವಗೊಳಿಸಿದುದು ಕನ್ನಡಿಗರಿಗೆಲ್ಲ ಹಿರಿಯ ಸಂತೋಷ. ವಿಜಯನಗರ ಆನಂದ ಕೋಲಾಹಲದಲ್ಲಿ ಮುಳುಗಿತು. ಅರಸ ಆಗಮಿಸಿದಾಗ ಕನ್ನಡ ಜನತೆ ವೈಭವದ ಸ್ವಾಗತ ನೀಡಿತು. ರಾಯ ವಿಜೃಂಭಣೆಯ ಉತ್ಸವಗಳನ್ನು ನಡೆಸಿ, ವಿಜಯಿಗಳಾಗಿದ್ದ ದಂಡಾಳುಗಳಿಗೆಲ್ಲ ಹಿರಿಯ ಬಹುಮಾನಗಳನ್ನಿತ್ತು ತುಷ್ಟಿಗೊಳಿಸಿದನು.



## ಅಸದಖಾನನ ಕಾರಸ್ಥಾನ

ಕೃಷ್ಣದೇವರಾಯ ರಾಜಧಾನಿಗೆ ಹಿಂದಿರುಗುವ ಹೊತ್ತಿಗಾಗಲಿ ಆದಿಲ್‌ಷಹನ ರಾಯಭಾರಿ ಅಲ್ಲಿಗೆ ಬಂದು ಅರಸನ ನಿರೀಕ್ಷೆಯಲ್ಲಿದ್ದನು. ರಾಯಭಾರಿಗೆ ವಿಜಯನಗರದ ಹೊರವಲಯದಲ್ಲಿ ವೈಭವಯುಕ್ತ ಬಿಡಾರ; ಅಂಥ ಸುಂದರ, ಕಲಾಯುತ ಡೇರೆಯನ್ನು ಈ ಕಡೆಯವರು ಎಂದೂ ಕಂಡಿಲ್ಲ. ಅವನೊಂದಿಗೆ ಚಿಕ್ಕ ಅಶ್ವದಳವೂ, ಭೃತ್ಯರ ದೊಡ್ಡ ಗುಂಪೂ, ಹೇರಿಗಾಗಿ ಒಂಟೆಗಳೂ ಇದ್ದವು. ಸುಲ್ತಾನನ ಸ್ವಂತ ಕಾರಕೂನರಿಬ್ಬರು ರಾಯಭಾರಿಯೊಂದಿಗೆ ಬಂದಿದ್ದರು.

ರಾಯಭಾರಿಗಳು ಬಂದರೆ ಅವರಿಗೆ ಕೂಡಲೆ ಕರೆ ಕೊಡುವುದು ಅರಸನ ರೂಢಿಯಲ್ಲ. ವಿಜಾಪುರರಾಯಭಾರಿ ಬಂದಿರುವ ಸುದ್ದಿ ತಿಳಿದರೂ ತಿಳಿಯದವನಂತೆ ರಾಯ ಸುಮ್ಮನೇ ಇದ್ದ. ತನ್ನ ಬರವಿನ ಸುದ್ದಿಯನ್ನು ಅರಸನಿಗೆ ತಿಳಿಸಲೂ, ಸಂದರ್ಶನಕ್ಕಾಗಿ ಅನುಮತಿ ಪಡೆಯಲೂ ರಾಯಭಾರಿ ದೂತರನ್ನಟ್ಟಿದ. ರಾಯಭಾರಿಗೆ ಸಂದರ್ಶನ ೀಯಲು ರಾಯ ಅನುಮತಿಸಿದರೂ, ತಾನು ಈಗ ತಾನೇ ಸಮರಮುಖದಿಂದ ಪುನರಾಗಮಿಸಿದ್ದು, ತಾ ವಿಶ್ರಮಿಸುವ ವರೆಗೆ ಕಾದಿರಬೇಕೆಂದು ಸೂಚಿಸಿದನು. ಕರ್ಣಾಟಕಸಾರ್ವಭೌಮನ ಆಹ್ವಾನಕ್ಕಾಗಿ ವಿಜಾಪುರರಾಯಭಾರಿ ದಿನ ದಿನವೂ ನಿರೀಕ್ಷಿಸುತ್ತ, ಒಂದು ತಿಂಗಳು ಕಳೆದರೂ ಕರೆಯಿಲ್ಲ. ಇತರ ಆಸ್ಥಾನಿಕರ ಸಂಪರ್ಕ ಬೆಳಸಿ, ತಾನಾಗಿಯೇ ನಿತ್ಯ ರಾಜಸಭೆಗೆ ಹೋಗತೊಡಗಿದನು. ತನ್ನಿರವನ್ನು ಗಮನಿಸದವನಂತೆ ರಾಯ ವರ್ತಿಸುತ್ತಿದ್ದುದನ್ನು ಅರಿತು, ರಾಯಭಾರಿ ತಾನಾಗಿಯೆ ಮಾತೆತ್ತುವ ಗೋಜಿಗೆ ಹೋಗಲಿಲ್ಲ. ಆದರೆ ದಿನವೂ ತಪ್ಪದೆ ಅರಮನೆಗೆ ಹೋಗಿ, ಇತರ ಆಸ್ಥಾನಿಕರ ಸಂಪರ್ಕ, ವಿಶ್ವಾಸ ಬೆಳಸುವ ಅಭ್ಯಾಸವನ್ನೇನೂ ನಿಲಿಸಲಿಲ್ಲ. ಅಂತೂ ಒಂದಾನೊಂದು ದಿನ ರಾಯನಿಂದ ರಾಯಭಾರಿಗೆ ಸುದ್ದಿ ಬಂತು, – ಮರುದಿನ ಶುಭದಿನ; ತಾನು ಏಕೆ ಬಂದಿರುವೆನೆಂದು ರಾಯಭಾರಿ ಬಂದು ತಿಳಿಸಬಹುದು, ಎಂದು. ತನ್ನೊಡೆಯ ಆದಿಲ್‌ಷಹ ಸೋತು ಸುಣ್ಣವಾಗಿರುವವ; ಕೃಷ್ಣದೇವನಾದರೋ ವಿಜಯಿಯಾದ ದರ್ಪೋದ್ಧತ ಸಾರ್ವಭೌಮ; ರಾಯಭಾರಿ ಏನು ಮಾಡಲೂ ಅನುವಿಲ್ಲದೆ ಹಲ್ಲು ಕಚ್ಚಿಕೊಂಡು ಸಮ್ಮನಿರಬೇಕಾಗಿತ್ತು; ಇಷ್ಟು ದಿನ ಕಳೆದಮೇಲಾದರೂ, ಈಗ ಬಂದ ಅಸಷ್ಟೆಯ ಆಹ್ವಾನವೇ ಮಹಾಪ್ರಸಾದವೆಂದು ಅಂಗೀಕರಿಸಬೇಕಾದ ಸಂದರ್ಭ.

ಸಾರ್ವಭೌಮನ ಸಂದರ್ಶನಸಂದರ್ಭಕ್ಕೆ ಉಚಿತ ಸನ್ನಾಹಗಳನ್ನು ರಾಯಭಾರಿ ಮಾಡಿಕೊಂಡನು. ತನ್ನ ರಾಯಭಾರದ ಅಮೂಲ್ಯತೆಯನ್ನು ಪರಿಗಣಿಸಿ ವಿಜಯನಗರದ ಹಲವು ಮುಸಲ್ಮಾನ ಪ್ರಮುಖರನ್ನು ಒಡಗೊಂಡು, ಸ್ವದಳದ ಭೇರಿ ಕಹಳೆಗಳ ವಾದ್ಯಧ್ವನಿಯಲ್ಲಿ ಅರಮನೆಗೆ ಸಾಗಿದನು. ಆಸ್ಥಾನಿಕರೂ, ಅರಮನೆಯ ಅಧಿಕಾರಿಗಳೂ



ರಾಯಭಾರಿಯನ್ನು ಗೌರವದಿಂದ ಸ್ವಾಗತಿಸಿದರು. ರಾಯಭಾರಿ ಪರಿವಾರಸಮೇತನಾಗಿ ಅರಮನೆಯ ದ್ವಾರ ಪ್ರವೇಶ ಮಾಡಿ, ಅರಸನ ಕರೆಗಾಗಿ ಕಾಯುತ್ತ ನಿಂತನು. ಕರೆ ಬರಲು ತಡವಾಗಲಿಲ್ಲ. ರಾಯಭಾರಿ ಸಭಾಮಂದಿರದ ಒಳಸಾಗಿ, ಸಿಂಹಾಸನಕ್ಕೆ ತುಸು ದೂರದಲ್ಲಿ ನಿಂತು ಕುರ್ನಿಸಾತು ಮಾಡಿದನು. ರಾಯಭಾರವನ್ನು ಅರುಹೆಂದು ರಾಯ ಆಜ್ಞಾಪಿಸಿದುದಾಗಿ ಕಂಚುಕಿ ರಾಯಭಾರಿಗೆ ತಿಳುಹಿದನು. ಇಂಥ ಮಹಾರಾಜಾಧಿರಾಜರ ಸಮ್ಮುಖದಲ್ಲಿ ವರ್ತಿಸಬೇಕಾದ ಭಯ, ನಮ್ರತೆಯ ಮುಖಭಾವದಿಂದ ರಾಯಭಾರಿ ನಿರೂಪಿಸಿದನು :

'ಮಹಾಪ್ರಭು ! ನನ್ನೊಡೆಯ ಆದಿಲ್‌ಷಹ ನನ್ನನ್ನು ತಮ್ಮ ಸಮ್ಮುಖಕ್ಕೆ ಕಳುಹಿದ್ದಾನೆ ; ಸತ್ಯಸಂಧ ನ್ಯಾಯಶೀಲ ಪ್ರಭುಗಳೆಂದು, ಪ್ರತಾಪಾನ್ವಿತ ಮಹಾರಾಜಾಧಿರಾಜರೆಂದು ತಮ್ಮಲ್ಲಿಟ್ಟ ಆದರ ಗೌರವಗಳನ್ನು ಆದಿಲ್‌ಷಹ ನನ್ನ ಮೂಲಕ ತಮಗೆ ಸಮರ್ಪಿಸುತ್ತಾನೆ. ನ್ಯಾಯವರ್ತನೆಯನ್ನು ಅನುಸರಿಸುವ ಕೃಪೆಮಾಡಬೇಕೆಂದು ಬಿನ್ನವಿಸುತ್ತಾನೆ. ಆತನಲ್ಲಿದ್ದ ಸ್ನೇಹವನ್ನೂ ಶಾಂತಿಯನ್ನೂ ತಾವು ನಿಷ್ಕಾರಣವಾಗಿ ಭಂಗಿಸಿದೀರಿ. ಶಾಂತಿಯ ಒಪ್ಪಂದ ಬಹು ಹಿಂದೆಯೇ ನಡೆದಿದ್ದು, ಸಂಬಂಧಿಸಿದ ಅರಸರೆಲ್ಲರಿಂದ: ಇದುವರೆಗೆ ಪಾಲಿತವಾಗಿತ್ತು. ಕರ್ಣಾಟಕದ ಅಧಿಪತಿ ಮಾತ್ರ ತನ್ನ

ನಾಡಿನಿಂದ ಹೊರನಡೆದು, ವಿಜಾಪುರರಾಜ್ಯದಲ್ಲಿ ಸಂಗ್ರಾಮದ ಅಗ್ನಿಪ್ರಜ್ವಲನೆ ಮಾಡಿದುದೇಕೆಂದು ಆದಿಲ್‌ಷಹ ಅರಿಯದಾಗಿದ್ದಾನೆ. ಕರ್ಣಾಟಕಸೇನೆ ರಾಯ್ಚೂರನ್ನು ಮುತ್ತಿ, ಸುತ್ತಣ ಸೀಮೆಯನ್ನು ಕೊಳ್ಳೆಹೊಡೆದು ವಿನಾಶಮಾಡಿದ ಸುದ್ದಿ ಬಂದಾಗ ಆದಿಲ್‌ಷಹ ತನ್ನ ಕಿವಿಗಳನ್ನೇ ನಂಬದಾದ; ರಾಯ್ಚೂರುದುರ್ಗದ, ಸುತ್ತಣ ವಿಜಾಪುರಸೀಮೆಯ ಸಂರಕ್ಷಣೆಗಾಗಿ ಸುಲ್ತಾನ ಸೈನ್ಯಸಮೇತನಾಗಿ ಬರುವುದೊಂದೇ ದಾರಿಯುಳಿಯಿತು. ವಿಜಾಪುರದ ಆಸ್ಥಾನಿಕರೆಲ್ಲ, ಪ್ರಮುಖ ಸೇನಾಧಿಕಾರಿಗಳೆಲ್ಲ ನಿಮ್ಮ ಸೇನೆಯಿಂದ ಹತರಾದರು; ವಿಜಾಪುರಶಿಬಿರ ಕೊಳ್ಳೆಯಾಗಿ, ವಿನಾಶವಾಯ್ತು. ಇದಕ್ಕೆಲ್ಲ ತಾವೇ ಪ್ರತ್ಯಕ್ಷದರ್ಶಿ. ಈ ವಿನಾಶಗಳಿಗೆಲ್ಲ ಪರಿಹಾರವನ್ನೂ ಸಮರಶಿಬಿರದಲ್ಲಿ ಕೈಸೇರಿದ ತುಪಾಕಿ ಮದ್ದುಗುಂಡು ಡೇರೆ ಆನೆ ಕುದುರೆ ಇವನ್ನೂ ರಾಯ್ಚೂರುದುರ್ಗವನ್ನೂ ತಾವು ಹಿಂದಿರುಗಿಸಬೇಕೆಂದು ಆದಿಲ್‌ಷಹ ಬಿನ್ನವಿಸುತ್ತಾನೆ. ಸುಲ್ತಾನನ ಅಭಿಲಾಷೆಯನ್ನು ಈಡೇರಿಸಿ ಸಂತೃಪ್ತಿಗೊಳಿಸಿದರೆ ಅವನೆಂದೆಂದೂ ನಿಮ್ಮ ನೆಚ್ಚಿನ ಮಿತ್ರ; ಇಲ್ಲವಾದಲ್ಲಿ ನಿಮ್ಮ ಕೃತ್ಯ ನಿಮಗೆ ಸಂತೋಷಕಾರಿಯಾದರೂ ಅಸಮಂಜಸ, ಅನಿಷ್ಟಕರ.'

ಗಂಭೀರ ಮುಖಮುದ್ರೆಯಿಂದ ಆಲಿಸುತ್ತಿದ್ದ ಕೃಷ್ಣದೇವರಾಯ ರಾಯಭಾರಿ ಮಾತು ಮುಗಿಸಿದ ಕೂಡಲೆ ಮೃದುವಾಗಿ ನಕ್ಕನು. ಸಭಾಸದರೆಲ್ಲ ರಾಯನ ಪ್ರತಿಕ್ರಿಯೆಗಾಗಿ ಮೈಯೆಲ್ಲ ಕಣ್ಣಾಗಿ ರಾಯನನ್ನು ದಿಟ್ಟಿಸಿದರು. ರಾಯನ ಗಂಭೀರಧ್ವನಿ ಮೊಳಗಿತು:

'ರಾಯಭಾರಿ. ಸುಲ್ತಾನನ ಬೇಡಿಕೆಗಳಿಂದ ನಾವು ಸಂತುಷ್ಟರು; ನೀಡಿಕೆ ಯಾವ ಕ್ಷಣದಲ್ಲಿ ಆಗುವುದೆಂಬುದು ಆದಿಲ್‌ಷಹನನ್ನೇ ಅವಲಂಬಿಸಿದೆ. ಆದಿಲ್‌ಷಹ ಯಾವ ಕ್ಷಣದಲ್ಲಿ ಆಗಮಿಸಿ ನನ್ನ ಪಾದಚುಂಬನ ಮಾಡುವನೋ ಆ ಕೂಡಲೆ ಅವನಿಂದ ನಾವು ತೆಗೆದುಕೊಂಡುದನ್ನೆಲ್ಲ ಹಿಂದಿರುಗಿಸುವುದಲ್ಲದೆ, ವಿಜಾಪುರ ದಂಡನಾಯಕ ಸಲಬತ್ ಖಾನನಿಗೂ ಬಿಡುಗಡೆ ಮಾಡುತ್ತೇವೆ. ನಮ್ಮ ಸವಿಸ್ನೇಹದ ಮಾತುಗಳನ್ನು ಸುಲ್ತಾನನಿಗೆ ನಿರೂಪಿಸು.'

ಕೃಷ್ಣದೇವರಾಯನ ಪೂರ್ವಿಕ ಸಂಗಮುವಂಶದ ದೇವರಾಯ ವಿಜಯನಗರದ ಅಧಿಪತಿಯಾಗಿದ್ದಾಗ ದಖಸ್ಸಿನ ಸುಲ್ತಾನ ಅಹಮದ್ ಷಾ ಬಾಹ್ಮನಿ ಸಂಗ್ರಾಮದಲ್ಲಿ ವಿಜಯನಗರದ ಯುವರಾಜನನ್ನು ಕೈಸೆರೆ ಹಿಡಿದಿದ್ದನು; ಯುವರಾಜನನ್ನು ಕತ್ತೆಯ ಮೇಲೆ ಕೂರಿಸಿ ತನ್ನ ಶಿಬಿರದ ಸಂತೆ, ಬೀದಿಗಳಲ್ಲಿ ಮೆರವಣಿಗೆ ಮಾಡಿಸಿದ್ದನು; ತನ್ನ ಸಿಂಹಾಸನದ ಕಾಲ್ಬದಿ ಕುಳ್ಳಿರಿಸಿ ಅವಮಾನ ಮಾಡಿದ್ದನು. ತನ್ನ ಪೂರ್ವಿಕನಿಗೆ ಆದ ಅವಮಾನಕ್ಕೆ ಪ್ರತೀಕಾರ ತೀರಿಸಿಕೊಳ್ಳುವ ಛಲದಿಂದ ಕೃಷ್ಣದೇವರಾಯ ಹೀಗೆ ಮಾತನಾಡಿದುದು.

ರಾಯಭಾರಿ ಪ್ರತಿಮಾತನಾಡದೆ ಕುರ್ನಿಸಾತು ಮಾಡಿ ನಿರ್ಗಮಿಸಿದನು; ರಾಯನ ನಿರೂಪವನ್ನು ಒಕ್ಕಣಿಸಿ ಓಲೆಯನ್ನು ಒಂಟಿಯ ಸವಾರನೊಂದಿಗೆ ಆದಿಲ್‌ಷಹನಿಗೆ ಕಳುಹಿದನು.

ಒಂಟಿಯ ಸವಾರನಿಂದಲೆ ಮಾರೋಲೆ ಶೀಘ್ರವಾಗಿ ಬಂದಿತು.

ತಾನು ವಿಜಯನಗರಕ್ಕೆ ಹೋಗಲಾರದುದರಿಂದ ಕೃಷ್ಣದೇವರಾಯನಿಗೆ ಸಮೀಪಗತನಾಗುವುದು ಹೇಗೆ? ಆದರೆ ರಾಯನ ಅಭಿಲಾಷೆಯನ್ನು ಪೂರಯಿಸುವುದು ತನಗೇನೋ ಬಹು ಆನಂದದಾಯಕ.

ಆದಿಲ್‌ಷಹನ ಉತ್ತರವನ್ನು ರಾಯನಿಗೆ ಒಪ್ಪಿಸಲಾಯಿತು. ಶತ್ರುಶಿಬಿರದಿಂದ ಸೂರೆಗೊಂಡ ಸರ್ವಸ್ವಕ್ಕಿಂತ ಶತ್ರುಸುಲ್ತಾನ ತನ್ನ ಪದಚುಂಬನ ಮಾಡುವುದು ರಾಯನಿಗೆ ಅಮೌಲ್ಯತರ. ರಾಯಭಾರಿಗೆ ಅರುಹಿದನು: 'ಸುಲ್ತಾನ ನನ್ನ ನಾಡಿನ ಗಡಿಯೆಡೆಗೆ ಅಡಿಯಿಟ್ಟು ನಿಂತಿರಲು ತಿಳುಹು; ನಾ ಸದ್ಯದಲ್ಲೇ ಅಲ್ಲಿಗೆ ಸಾಗುವೆ.'

ರಾಯಭಾರಿ ತನ್ನೊಡೆಯನೆಡೆಗೆಂದು ನಿರ್ಗಮಿಸಿದ, ಕನ್ನಡನಾಡ ಗಡಿಯೆಡೆಗೆ ಸೈನ್ಯಸಮೇತ ಬಂದು ಸಿದ್ಧವಾಗಿರಲೆಂದು ತಿಳುಹಲು. ಕೃಷ್ಣದೇವರಾಯನೂ ಪಡೆಗೊಂಡು ಅನಿಲವೇಗದಿಂದ ಮುಂದೆ ಸಾಗಿ ಗಡಿಯೆಡೆಯ ಮುದಗಲ್ಲಿಗೆ ಸೇರಿದ; ಸೇರಿ, ಶತ್ರುಸೈನ್ಯದ ನಿರೀಕ್ಷೆಯಲ್ಲಿ ಬೀಡುಬಿಟ್ಟ. ಆದಿಲ್‌ಷಹ ಆಗಮಿಸುತ್ತಿರುವನೆಂದು ಸುದ್ದಿ ಬಂತು;

ಇನ್ನೇನು ಸಮೀಪಗತನಾದನೆಂಬ ಸುದ್ದಿಯೂ ಹಿಂದೆಯೇ ಬಂತು. ರಾಯನಿಗೆ ಸುಲ್ತಾನನ ಭೇಟಿಯಾಗಲು ತುಂಬ ಕಾತರ; ಭೇಟಿ ಶೀಘ್ರತರವಾಗಲೆಂದು ತಾನೂ ಮುಂದುವರಿದು ಕರ್ಣಾಟಕದ ಗಡಿಯನ್ನು ಕ್ರಮಿಸಿ ವಿಜಾಪುರ ರಾಜ್ಯದಲ್ಲಿ ಕಾಲಿಟ್ಟ. ಆದರೆ ರಾಯ್ಚೂರ ಕಾಳಗದಲ್ಲಿ ಮಣ್ಣಿಗೆ ಮಣ್ಣು ತಿಂದ ಆದಿಲ್‌ಷಹನಿಗೆ ರಾಯನನ್ನು ಮತ್ತೊಮ್ಮೆ ಪ್ರತಿಭಟಿಸುವ ಸಾಹಸವೆ! ಆದಿಲ್‌ಷಹ ಹತ್ತಿರದಲ್ಲೇ ಇದ್ದಾನೆ, ಹತ್ತಿರದಲ್ಲೇ ಇದ್ದಾನೆ, ಎಂದು ಸುದ್ದಿ ಬರುತ್ತಿದ್ದು ಅವನ ಭೇಟಿಗಾಗಿ ರಾಯ ಮುಂದೆ ಮುಂದೆ ಸಾಗುತ್ತಿದ್ದು, ವಿಜಾಪುರನಗರವೆ ಎದುರು ಸಿಕ್ಕಿತು.

ದಖನ್‌ನಲ್ಲೆಲ್ಲ ವಿಜಾಪುರ ಸುಂದರತಮ ನಗರ. ಸುಂದರವಾದ ಆಧುನಿಕ ಸದನಗಳಿಂದ, ದ್ರಾಕ್ಷಿ ದಾಳಿಂಬೆ ಕಿತ್ತಲೆ ನಿಂಬೆ ಮುಂತಾದ ವಿವಿಧ ಫಲಭರಿತ ಉಪವನಗಳಿಂದ ಶೋಭಿಸುವ ಸುಂದರ ನಗರ. ಆದಿಲ್‌ಷಹನ ಆಗಮನಕ್ಕಾಗಿ ಕಾದು ಕುಳಿತಿರಲು ಈ ಸುಂದರ ನಗರಕ್ಕಿಂತ ಉತ್ತಮತರ ಪ್ರದೇಶವಿಲ್ಲವೆಂದು ಭಾವಿಸಿ ರಾಯ ವಿಜಾಪುರವನ್ನು ಪ್ರವೇಶಿಸಿದ. ಗಡಿನಾಡಿನಲ್ಲೆ ಎದುರುಗೊಳ್ಳುವೆನೆಂದ ಆದಿಲ್‌ಷಹ ತನ್ನನ್ನು ಒಳನಾಡವರೆಗೂ ಬರುವಂತೆ ಎಸಗಿದನೆ ಎಂದು ರಾಯನಿಗೆ ಕೋಪ; ಆದಿಲ್‌ಷಹನೇನಾದರೂ ಈಗ ತನ್ನ ಸಮ್ಮುಖಕ್ಕೆ ಬಂದುದಾದರೆ ಅವನಿಗೆ ಮರಣದಂಡನೆ ವಿಧಿಸಬೇಕು, ಇಲ್ಲವೆ ಅವನನ್ನು ಕೈಸೆರೆಹಿಡಿಯಬೇಕು, ಎಂದು ಸಂಕಲ್ಪಿಸಿದ. ಸುಲ್ತಾನನ ಅರಮನೆಯೇ ರಾಯನಿಗೆ ಬಿಡಾರ. ಕನ್ನಡದಂಡಾಳುಗಳೂ ದಳಪತಿಗಳೂ ತೆರವಾಗಿದ್ದ ಇತರ ಗೃಹಗಳಲ್ಲಿ ತಂಗಿದರು.

ಕೆಲವೇ ದಿನಗಳಲ್ಲಿ ವಿಜಾಪುರನಗರ ಹಾಳ್‌ಬಿದ್ದಂತೆ ಗೋಚರ. ಬಯಲುಸೀಮೆಯ ನಡುವಣ ನಗರ; ಸೌದೆ ಸಿಗುವುದೇ ದುಸ್ತರ; ದೂರದ ಎಡೆಗಳಿಂದ ಬರಬೇಕು. ಅಡಿಗೆ ಮಾಡಲು ಸೌದೆಯ ಅಭಾವವಾಗಲು ಕರ್ಣಾಟಕದ ಧೀರ ಯೋಧರು ನಗರದ ಗೃಹಗಳನ್ನೇ ಕಿತ್ತು, ಮನೆಗಳಿಗೆ ಬಳಸಿದ್ದ ಮರಮುಟ್ಟುಗಳನ್ನು ಸೌದೆಯಾಗಿ ಸುಡತೊಡಗಿದರು. ಅಲ್ಪ ಕಾಲದಲ್ಲೇ ನಗರವೆಲ್ಲ ಹಾಳ್‌ಬಿದ್ದಂತಾದುದು ಗುಪ್ತಚಾರರ ಮೂಲಕ ಆದಿಲ್‌ಷಹನಿಗೆ

ತಿಳಿಯಿತು ; ತನ್ನ ದಳಪತಿಗಳೂ ಅಧಿಕಾರಿಗಳೂ ಗೃಹವಿಹೀನರಾಗಲು ಮಾಡಿದ ಅಪರಾಧವೇನು, ಅವರ ಮನೆ ಮುರಿಸಲು ಆಣತಿಯಿತ್ತುದೇಕೆ, ಎಂದು ರಾಯನಿಗೆ ಹೇಳಿಕಳುಹಿದನು. ತನ್ನಾಜ್ಞೆಯಿಂದ ಈ ವಿನಾಶ ಆದುದಲ್ಲ; ತನ್ನನ್ನು ಸೇನಾಸಮೇತ ಬರಲು ಆಹ್ವಾನಿಸಿದಮೇಲೆ ಸಾಕಷ್ಟು ಸೌದೆಯನ್ನು ಅಣಿಮಾಡದೆ ಇದ್ದುದು ಆದಿಲ್‌ಷಹನ ಕರ್ತವ್ಯಲೋಪ; ಅದಕ್ಕಾಗಿ ಕನ್ನಡದಂಡಾಳುಗಳು ಈ ಬಗೆ ಮುಯ್ಯಿ ತೀರಿಸಿಕೊಂಡಿದಾರೆ; ಇದೂ ತನ್ನಿಚ್ಛೆಗೆ ವಿರೋಧವಾಗಿ ನಡೆದುದು; ದಂಡಾಳುಗಳನ್ನು ಈ ಕೃತ್ಯದಿಂದ ತಡೆಹಿಡಿಯಲು ತನಗೆ ಅಸಾಧ್ಯವಾಯ್ತು; ಎಂಬುದು ರಾಯನ ಉತ್ತರ.

ವಿಜಾಪುರಕ್ಕೆ ನೀರಿನ ಆಸರೆ ಅಲ್ಲಿನ ಎರಡು ಸರೋವರ. ಬಯಲುಸೀಮೆಯ ನಡುವಣ ಈ ಎರಡು ಸರೋವರಗಳಿಗೆ ಸುತ್ತ ಬಿದ್ದ ಮಳೆ ನೀರು ಬಂದು ಶೇಖರವಾಗುವುದು; ಇದು ಬಿಟ್ಟು ಅಲ್ಲಿಗೆ ಬೇರೆಯ ನೀರ ಆಸರೆಯೇ ಇಲ್ಲ. ಕರ್ಣಾಟಕಸೇನೆ ವಿಜಾಪುರಕ್ಕೆ ಸಮೀಪಗತವಾಗುತ್ತಿರುವುದು ತಿಳಿದ ಕೂಡಲೆ ಆದಿಲ್‌ಷಹ ಈ ಸರೋವರಗಳ ನೀರನ್ನು ಹೊರಹಾಯಿಸಿ ಬರಿದು ಮಾಡಿಸಿದ್ದನು. ಕರ್ಣಾಟಕಪಡೆಗೆ ನೀರಿನ ಪೂರೈಕೆ ಇಲ್ಲದೆ ಬೇಗನೆ ನಗರತ್ಯಾಗ ಮಾಡಲಿ, ಎಂಬುದೇ ಉದ್ದೇಶ. ಉದ್ದೇಶವೇನೋ ಸಫಲವಾಯ್ತು; ಸೇನೆಗೆ ನೀರು ಸಾಕಾಗದಿರಲು ರಾಯ ಸೇನಾಸಮೇತನಾಗಿ ವಿಜಾಪುರವನ್ನು ತ್ಯಜಿಸಿ, ಮುದಗಲ್ಲಿಗೆ ನಿರ್ಗಮಿಸಿದನು.

ರಾಯ ಮುದಗಲ್ಲಿಗೆ ನಿರ್ಗಮಿಸಿದೊಡನೆಯೇ ಸುಲ್ತಾನ ವಿಜಾಪುರಕ್ಕೆ ಪುನರಾಗಮಿಸಿದನು; ಉಧ್ವಸ್ತವಾದ ಆ ಮಹಾನಗರವನ್ನು ಕಂಡು ಸುಲ್ತಾನನ ಕಣ್ಣು ಹನಿಗೂಡಿದವು; ದಖನ್ನಿನಲ್ಲೆಲ್ಲ ಸುಂದರತಮ ನಗರ ಇಂದು ಭಗ್ನ - ವಾನರಸೇನೆ ಸೂರೆಗೈದ ಅಶೋಕವನದಂತೆ. ರಾಯನ ಕರೆಯಂತೆ ತಾನೇ ಅವನ ನಾಡೊಳಗೆ ಹೋಗಲಿಲ್ಲವೇಕೆ! ಅವನ ಆಹ್ವಾನವನ್ನು ಮನ್ನಿಸದೇ ಇದ್ದು, ನಗರವಿನಾಶಕ್ಕೆ ತಾನೇ ಕಾರಣವಾದಂತಾಯ್ತು. ತಾನು ವಿಜಯರಾಜ್ಯ

ದೊಳಗೇ ಸಾಗಲು ಅಭಿಲಾಷಿಸಿದ್ದರೂ ಆಲೋಚಕರ ಆಪ್ತವಾಕ್ಕಿನಿಂದ ತಪ್ಪು ಹಾದಿಗೆ ಎಳೆಯಲ್ಪಟ್ಟಿ. ಅವನ ಮನಸ್ಸು ಇಂದು ನೂತನಪಥಗಾಮಿ. ಆಪ್ತಾಲೋಚಕರ ಸಭೆ ಕರೆದನು.

ಕರ್ಣಾಟಕಸಿಂಹನ ಪ್ರತಿರೋಧವನ್ನು ಸೆಣಿಸಿ ತನ್ನ ಸೇನೆಯನ್ನೂ ಸೀಮೆಯನ್ನೂ ಉಧ್ವಸ್ತಗೊಳಿಸುವುದರ ಬದಲು ಸ್ನೇಹಾದರವನ್ನು ಬೆಳೆಸಿ, ತನ್ನ ರಾಜ್ಯವನ್ನು ವಿಸ್ತೃತಗೊಳಿನಬಹುದು, ರಾಯನ ನೆರವಿನಿಂದ ತನ್ನ ಹಲವು ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಬಹುದು; ಎಂಬ ಆಲೋಚನೆಯನ್ನು ಪದೇ ಪದೇ ಪ್ರಸ್ತಾಪಿಸಿದಾಗ ಆಲೋಚಕರಲ್ಲಿ ಕೆಲವರಾದರೂ ಅನುಮೋದಿಸಿದರು. ತೀರ ಉತ್ಸುಕನಾಗಿದ್ದವನು ಅಸದಖಾನ್.

' ಖಾವಂದ. ನಾನು ವಿಜಾಪುರಸಿಂಹಾಸನದ ನಿಸ್ಸೀಮ ಸೇವಕನೆಂಬುದು ತಮಗೆ ಸಂಪೂರ್ಣ ಮನವರಿಕೆಯಾಗಿದೆ. ಇಂಥ ಸಂದಿಗ್ಧಸಂದರ್ಭದ ತೊಡಕು ಬಿಡಿಸುವ ಹೊಣೆ ನನ್ನ ಮೇಲೇ ಇರಲಿ. ಕೃಷ್ಣದೇವರಾಯನ ಬಳಿಗೆ ಸುಲ್ತಾನರ ರಾಯಭಾರಿಯಾಗಿ ನಾನೇ ಹೋಗುವೆ. ಕ್ಲಿಷ್ಟತೆಗಳನ್ನೆಲ್ಲ ಪರಿಹರಿಸುವೆ; ಖಾವಂದರ ಅಭಿಲಾಷೆ ಎಲ್ಲ ರೀತಿಯಲ್ಲೂ ಕಾರ್ಯಗತವಾಗುವಂತೆ ಮಾಡುವೆ '

ಆದಿಲ್‌ಷಹ ಅಸದಖಾನನ ಕೇಳಿಕೆಗೆ ಕಿವಿ ಜೋತ; ರಾಯಭಾರಿಯಾಗಿ ಅಸದಖಾನನನ್ನೆ ಕಳುಹಲು ನಿಶ್ಚಯವಾಯ್ತು.

ಅಸದಖಾನ್ ಬೆಳಗಾವಿಯ ದುರ್ಗಾಧಿಪತಿ. ರಾಯ್ಚೂರಸಮರದಲ್ಲಿ ವಿಜಾಪುರಸೇನೆ ಪರಾಜಿತವಾಗುವ ಸೂಚನೆ ಗೋಚರವಾದ ಕೂಡಲೆ ಆದಿಲ್‌ಷಹನನ್ನು ಪ್ರೇರೇಪಿಸಿ, ಅವನೊಂದಿಗೆ ಪಲಾಯನಮಾಡಿದವನು. ಈತ ತಂತ್ರಿ. ರಾಯಭಾರಿಯಾಗಿ ತಾನೇ ತೆರಳಿ ಸುಲ್ತಾನನ ಸೇವೆಮಾಡುವುದು ಇವನ ಹಂಬಲವಲ್ಲ; ಇದಕ್ಕೆ ವಿಜಾಪುರದ ಯಾವ ಸಾಮಾನ್ಯ ಸರದಾರನಾದರೂ ಸಾಕಿತ್ತು. ರಾಯನ ಸೆರೆಯಲ್ಲಿದ್ದ ವಿಜಾಪುರದಳಪತಿ ಸಲಬತ್‌ಖಾನನಲ್ಲಿ ತನಗಿದ್ದ

ಮಾತ್ಸರ್ಯವೆ ಅಸದಖಾನ್ ಈ ಕಾರ್ಯವನ್ನು ಕೈಕೊಳ್ಳಲು ಕಾರಣ. ರಾಯ್ಚೂರರಣಭೂಮಿಯಿಂದ ಆದಿಲ್‌ಷಹ ಪಲಾಯನವಾಗಲು ಅಸದಖಾನನೇ ಕಾರಣವೆಂಬುದು ದಂಡನಾಯಕ ಸಲಬತ್‌ಖಾನ್‌ಗೆ ತಿಳಿದಿತ್ತು. ತನ್ನ ಭೇಟಿಗಾಗಿ ವಿಜಾಪುರದಿಂದ ಯಾರಾದರೂ ಬಂದಾಗಲೆಲ್ಲ ಸಲಬತ್‌ಖಾನ್ ಅಸದಖಾನನ ಹೇಡಿವರ್ತನೆಯನ್ನು ಕಟುವಾಗಿ ಟೀಕಿಸುತ್ತ, ಅವನ ಪ್ರಚೋದನೆಯಿಂದ ಆದಿಲ್‌ಷಹ ರಣಭೂಮಿಯಿಂದ ನಿರ್ಗಮಿಸಿದ್ದು, ವಿಜಾಪುರಸೇನೆ ಧೃತಿಗೆಟ್ಟು ಪಲಾಯನಹೊಂದಲು ಇದೇ ಕಾರಣವಾಯ್ತು, ಎಂದೂ; ತಾನು ಬಿಡುಗಡೆಹೊಂದಬಯಸುವುದೇ ಆದರೆ ಅದು ಅಸದಖಾನನನ್ನು ಹಿಡಿ ತರಿಸಿ, ಖಡ್ಗದಿಂದ ಛಿದ್ರಛಿದ್ರಮಾಡುವ ಅಭಿಲಾಷೆಯಿಂದ ಮಾತ್ರ, ಎಂದೂ ಹೇಳುತ್ತಿದ್ದನು. ಸಲಬತ್‌ಖಾನ್ ಬಿಡುಗಡೆಯಾಗಿ ಹೊರಬಂದುದೇ ಆದರೆ ತನ್ನ ಸರ್ವನಾಶವಾಗುವುದೆಂದು ಅಸದಖಾನ್ ಸಂಪೂರ್ಣ ಬಲ್ಲ. ಸಲಬತ್‌ಖಾನನನ್ನು ಯಾವ ರೀತಿಯಾದರೂ ಕೊನೆಗಾಣಿಸಬೇಕೆಂದು ಹಂಬಲಿಸುತಿದ್ದ ಅಸದಖಾನನಿಗೆ ಈ ರಾಯಭಾರ ದೊರೆತು ತುಂಬ ಹಿಗ್ಗು.

ಜಿಂಕೆಯಂತೆ ಜಿಗಿಯುತ್ತಿದ್ದ ಬಿಳಿ ಕುದುರೆಯನ್ನೇರಿ ಅಸದಖಾನ್ ಪ್ರಯಾಣ ಸನ್ನದ್ಧ. ಅಂಗರಕ್ಷಕರಾಗಿ ಶಸ್ತ್ರಪಾಣಿ ಅಶ್ವಾರೋಹಿಗಳು; ಸೇವೆಗಾಗಿ ಊಳಿಗದವರು. ತನ್ನ ಭಾವೀ ಜೀವನವನ್ನೇ ನಿರ್ಧರಿಸಬಹುದಾಗಿದ್ದ ಮುಖ್ಯ ರಾಯಭಾರವನ್ನು ಬೀಳ್ಕೊಡಲು ಸುಲ್ತಾನ ಆದಿಲ್‌ಷಹನೇ ಹೊರಬಿದ್ದನು. ಆದಿಲ್‌ಷಹನ ಮನಸ್ಸು ಚಿಂತೆಯಿಂದ, ಅನಿಶ್ಚಿತತೆಯಿಂದ ದಹಿಸುತ್ತಿತ್ತು. ಚತುರ ಅಸದಖಾನ್ ಒಡೆಯನ ಕೆಲದಲ್ಲೇ ಕುದುರೆನಡೆಸುತ್ತ, ಸರಸೋಕ್ತಿಗಳಿಂದ ಅವನ ಮನಸ್ಸನ್ನು ಪ್ರಸನ್ನಗೊಳಿಸಲು ತೊಡಗಿದ್ದನು. ಅಸದಖಾನನಲ್ಲಿ ಸುಲ್ತಾನನ ಮನವೊಲಿದು ಅವನಾಡಿದ ಸಾದಾ ಮಾತುಗಳಿಗೂ ನಗೆಯ ಬುಗ್ಗೆಯುಕ್ಕಿಸುತಿದ್ದನು. ನದೀತೀರದವರೆಗೂ ಬಂದು ಆದಿಲ್‌ಷಹ ಹಿಂದಿರುಗಿದನು. ಪರಿವಾರ ಸಮೇತನಾದ ಅಸದಖಾನ್ ಮುದಗಲ್ ದುರ್ಗದ್ವಾರದಲ್ಲಿ ಬಂದು ನಿಂತು, ಪ್ರವೇಶಕ್ಕಾಗಿ

ಅರಸನ ಅನುಮತಿ ಬೇಡಿದನು. ಕೂಡಲೆ ಪ್ರವೇಶ ದೊರೆಯಿತು. ಪಟ್ಟಣಕ್ಕೆ ಬಂದು ಹಲವು ದಿನ ಕಳೆದಾದಮೇಲೆ ಅರಸನ ಸಮ್ಮುಖಕ್ಕೆ ಬರಲು ಕರೆ ಬಂತು.

ಚತುರೋಕ್ತಿಗಳಿಂದ ದಣಿಗಳ ಮನಸ್ಸನ್ನು ಪ್ರಸನ್ನಗೊಳಿಸಿ, ಆಕರ್ಷಿಸುವ ವಿದ್ಯೆಯಲ್ಲಿ ಅಸದಖಾನ್ ಸಿಷ್ಣಾತ. ಕರ್ಣಾಟಕದ ಅಧಿಪತಿಯ ಬಳಿನಿಂದಾಗ ಖಾನನ ನಡವಳಿಕೆ ಕುಶಲವಾದುದು, ಬಲುಹುಳ್ಳದು. ತನ್ನ ಚತುರೋಕ್ತಿಗಳಿಂದ, ಕುಶಲವರ್ತನೆಯಿಂದ ಆದಿಲ್‌ಷಹನಲ್ಲಿ ರಾಯ ತಾಳಿದ್ದ ಉಗ್ರಕ್ರೋಧವನ್ನು ಪರಿಹರಿಸಿ, ಎಲ್ಲ ಕೋಪವೂ ಸಲಬತ್‌ಖಾನನಲ್ಲಿ ನೆಲೆಗೊಳ್ಳುವಂತೆ ಎಸಗಿದನು.

'ಮಹಾಪ್ರಭು. ಸುಲ್ತಾನ್ ಆದಿಲ್‌ಷಹ ವಿನಯ ಸ್ವಭಾವದ ಸಜ್ಜನ; ಕರ್ಣಾಟಕದೊಡೆಯರಲ್ಲಿ ಮಿಗಿಲಾದ ಆದರ ವಿಶ್ವಾಸವುಳ್ಳವ. ತಮ್ಮ ಆಹ್ವಾನದಂತೆ ವಿಜಯನಗರಕ್ಕೆ ಐತಂದು ತಮ್ಮ ಸಂದರ್ಶನಭಾಗ್ಯವನ್ನು ಪಡೆಯ ಬೇಕೆಂದು ಸುಲ್ತಾನನ ಅಭಿಲಾಷೆ. ಆದರೆ ಸೇನಾಪತಿ ಸಲಬತ್‌ಖಾನನ ಕಾರಸ್ಥಾನವೇ ಇದಕ್ಕೆ ವಿಘ್ನ. ವಿಜಯನಗರದ ನೆರೆಮನೆಯಲ್ಲಿ ಕೊಳೆಯುತ್ತಿದ್ದರೂ ಸಲಬತ್‌ಖಾನನೇನೂ ಸುಮ್ಮನಿರುವ ಜಾತಿಯಲ್ಲ. ಆದಿಲ್‌ಷಹ ವಿಜಯನಗರಕ್ಕೆ ಬರಕೂಡದೆಂದೂ, ಅರಸರ ಮಾತಿಗೆ ಮೋಸಹೋಗಿ ಬಂದುದೇ ಆದರೆ ಇಲ್ಲಿ ಅರಸರಿಂದ ಕೊಲೆಗೀಡುವುದಾಗಿಯೂ ಸಲಬತ್‌ಖಾನ್ ಗುಪ್ತಪತ್ರವನ್ನು ಕಳುಹಿದ್ದ.'

'ಹೌದೆ! ಹೌದೆ! ಎಂಥ ಸುಳ್ಳಿನ ಕಂತೆ' ರಾಯನಿಗೆ ತೀರ ಅಚ್ಚರಿ.

'ಸೇನಾಪತಿಯೇ ಈ ರೀತಿ ಸುದ್ದಿ ಕಳುಹಿದಮೇಲೆ ಸುಲ್ತಾನ ವಿಜಯನಗರಕ್ಕೆ ಬರುವುದು ಹೇಗೆ! ಇದೇ ಕಾರಣವಾಗಿ ತಮಗೆ ಇಷ್ಟುದೂರ ಅನ್ಯಥಾ ಪ್ರಯಾಣಶ್ರಮ.'

ಹೀಗೆ, ಹಾಗೆ ಸಲಬತ್‌ಖಾನನ ಮೇಲೆ ಹೇಳಬಹುದಾದ ಚಾಡಿಗಳನ್ನೆಲ್ಲ ರಾಯನ ಕಿವಿಗೆ ಊದಿದ. ಅಸದಖಾನ

ಸಿಂಥ ಕೃತ್ರಿಮಿಯೆಂಬುದಾದರೂ, ಸೇನಾನಿಯ ಅವಸಾನದಿಂದ ಅಸದಖಾನನ ಸ್ವಾರ್ಥಸಾಧನೆಯಾಗುವುದೆಂಬುದಾದರೂ ರಾಯನಿಗೇನು ಗೊತ್ತು. ಅಸದಖಾನನಂಥವನು ಸುಳ್ಳು ಹೇಳಬಹುದೆಂಬ ಕಲ್ಪನೆಯೂ ರಾಯನಿಗಿಲ್ಲ. ಅಸದಖಾನನ ಆಪಾದನೆಗಳೆಲ್ಲ ಸತ್ಯವೆಂದೇ ನಂಬಿ, ಸಲಬತ್ ಖಾನನ ಮೇಲೆ ಕೋಪಗೊಂಡನು. ಸಲಬತನ ಶಿರಚ್ಛೇದನ ಮಾಡಲು ಆಣತಿ ಕಳುಹಿದನು. ರಾಜಾಜ್ಞೆ ತಲುಪಿದ ಕೂಡಲೆ ವಿಜಯನಗರದ ಸೆರೆಮನೆಯಲ್ಲಿದ್ದ ಸಲಬತ್ ಖಾನನ ಶಿರಚ್ಛೇದನವಾಯ್ತು.

ಅಸದಖಾನ್ ಮಹತ್ವಾಕಾಂಕ್ಷಿ; ಆತನ ಒಂದೇ ಅಭಿಲಾಷೆಯೆಂದರೆ ಸ್ಥಾನಮಾನಗಳಲ್ಲಿ ಮೇಲೆಮೇಲೇರುವುದು; ಅವನು ರಾಜಭಕ್ತನಲ್ಲ; ರಾಜ್ಯಸೇವಕನಲ್ಲ. ಸಲಬತ್ ಖಾನನ ಶಿರಚ್ಛೇದನದಿಂದ ಅಸದನ ಕಾರ್ಯಸಿದ್ಧಿಯಾಯ್ತು; ಇನ್ನು ರಾಯನ ಬಳಿ ಇರಲೇಕೆ! ಅಲ್ಲದೆ, ತನ್ನ ಕೃತ್ರಿಮವರ್ತನೆ ರಾಯನಿಗೆ ತಿಳಿದರೆ ತನಗೂ ಶಿರಚ್ಛೇದನ. ರಾಯನಿಂದ ದೂರವಾಗುವುದೇ ದಾರಿ.

'ಮಹಾಪ್ರಭು. ತಮಗೂ ಸುಲ್ತಾನನಿಗೂ ಸೌಹಾರ್ದ ಏರ್ಪಡಲು ವಿಘ್ನಕಾರಿಯಾಗಿದ್ದ ಸಲಬತ್ ಖಾನ್ ಈಗ ಇಲ್ಲ. ನಿರಾತಂಕವಾಗಿ ಆದರ ವಿಶ್ವಾಸ ಬೆಳೆದು ಬರಬಹುದು. ನಾನೀಗಲೇ ಹೋಗಿ ಸುಲ್ತಾನನನ್ನು ನದೀತೀರಕ್ಕೆ ಕರೆತರುವೆ, ತಮ್ಮ ಸಂದರ್ಶನಾರ್ಥವಾಗಿ. ನಾ ಹಿಂದೆರಳಲು ಅಪ್ಪಣೆಯಾಗಲಿ.'

'ಅವಸರವೇನು! ಸುಲ್ತಾನನ ದೌಲತ್ತಿನಲ್ಲಿ ಸುಖಭೋಗ ಮಾಡಿದೀಯೆ. ಹಿಂದೂರಾಜರು ನೀಡುವ ಆಥರಾತಿಥ್ಯಗಳಲ್ಲಿ ಇನ್ನೂ ಕೆಲವು ಕಾಲ ತಲ್ಲೀನನಾಗು. ನಿನ್ನ ಆಮೋದಕ್ಕೆ ಬೇಕಾದ ಎಲ್ಲವನ್ನೂ ಅಣಿಮಾಡಲು ಆಣತಿಯಿತ್ತಿದೇನೆ.'

'ಬಂದು ಬಹುದಿನ ಕಳೆದವು. ನಾನೀಗಲೇ ಹಿಂದೆರಳಬೇಕು.'

'ನಿನ್ನ ಸಹವಾಸದಲ್ಲಿ ಸಂತುಷ್ಟನಾಗಿದೇನೆ. ನಿನ್ನ ಚತುರೋಕ್ತಿಗಳಿಂದ ಪ್ರಸನ್ನನಾಗಿದೇನೆ. ವಿಶೇಷ ಲೋಕ

ಸಂಚಾರವಮಾಡಿ, ವಿವಿಧ ಅನುಭವಗಳಿಂದ ಬಣ್ಣಗೊಂಡ ನಿನ್ನಂಥ ವ್ಯಕ್ತಿಗಳ ಸಹವಾಸ ನನಗೆ ವಿಶೇಷ ಪ್ರಿಯ. ವಿಜಯಸಾಮ್ರಾಜ್ಯದ ಇನ್ನೂ ಇನ್ನೂ ವೈಭವಗಳನ್ನು ನಿನಗೆ ತೋರಿಸುತ್ತೇನೆ. ಸುಲ್ತಾನ್‌ಷಾಹಿಯ ಆಡಳಿತ ರೀತಿನೀತಿಗಳ ಬಗೆಗೆ ನಿನ್ನೊಡನೆ ಮಾತನಾಡಲೂ ನನಗೆ ಅಪೇಕ್ಷೆ.'

ಅಸದಖಾನ್ ನಿಲ್ಲಲು ಒಪ್ಪಲಿಲ್ಲ; ನಿರ್ಗಮಿಸಲು ರಾಯ ಒಪ್ಪಲಿಲ್ಲ.

ಇಷ್ಟು ದಿನ ವಿರಾಮವಾಗಿ, ನಿರ್ಯೋಚನೆಯಿಂದ ತನ್ನೊಂದಿಗೆ ಕಾಲಕಳೆಯುತ್ತಿದ್ದ ಅಸದಖಾನ್ ಸಲಬತನಿಗೆ ಮರಣದಂಡನೆಯಾದಕೂಡಲೆ ಹಿಂದಿರುಗಲು ಹೀಗೇಕೆ ಚಡಪಡಿಸುತ್ತಿರುವನೆಂದು ರಾಯ ಸಂದೇಗಗೊಂಡನು. ಅಸದಖಾನ್ ಇಲ್ಲಿಗೆ ಬಂದ ಉದ್ದೇಶ ರಾಯಭಾರಕ್ಕಿಂತ ಸಲಬತನ ಅವಸಾನ, ಎಂಬುದು ರಾಯನ ಚಾಣಾಕ್ಷಮನಸ್ಸಿಗೆ ತಟಕ್ಕನೆ ಹೊಳೆಯಿತು. ತನ್ನ ಸೇನಾನಿಯ ಮರಣಕ್ಕಾಗಿ ಸುಲ್ತಾನ ಕಾತುರಗೊಂಡಿರುವುದು ಅಸಾಧ್ಯ; ಅಸದನಿಗೇ ಈ ಕಾತುರವಿರಬೇಕು. ಕಾರಣವೇನು ? ರಾಯನ ಮನಸ್ಸು ಹೊಯ್ದಾಡಿತು.

'ಅಲ್ಲಾ ಹೋ ಅಕ್ಬರ್'

'ನಡಿ ಆಚೆ, ಫಕೀರ, ಅರಮನೆಯ ಮುಂದೆ ಕಾಸಿನ ಭಿಕ್ಷೆ ಬೇಡಲು ಬರುವುದೆ. ನಡಿ, ಆಚೆ.'

'ಭಿಕ್ಷೆ ಬೇಡಲು ಬಂದಿಲ್ಲ. ಮಹಾರಾಜರ ಸಂದರ್ಶನಕ್ಕಾಗಿ ಬಂದಿದೇನೆ.'

'ಹಹ್ಹ. ಮಹಾರಾಜರ ಬಳಿ ನಿನಗೇನು ಕೆಲಸ! ತೊಲಗಾಚೆ.'

'ನಾ ಭಾರತವಿಹಾರಿ. ಹಲವು ಅಪೂರ್ವ ಮೂಲಿಕೆಗಳನ್ನು ಬಲ್ಲೆ. ಮಹಾರಾಜರಿಗೆ ಕೊಡಲು ಬಂದೆ.'

'ಪೇಟೆಯ ಪಂಡಿತನಿಗೆ ಕೊಡಹೋಗು' ಕಾವಲುಗಾರರು ತಮ್ಮ ಚಾತುರ್ಯಕ್ಕಾಗಿ ತಾವೇ ನಕ್ಕರು. ಫಕೀರ ಗಂಭೀರನಾಗಿಯೆ ನಿಂತಿದ್ದನು.

ದ್ವಾರದ ಬಳಿ ನಿಂತಿದ್ದ ಫಕೀರ ವಾತಾಯನದ ಮೂಲಕ ರಾಯನ ಕಣ್ಣಿಗೆ ಗೋಚರ; ಅವನನ್ನು ಕರೆತರಲು ಚರನನ್ನಟ್ಟಿದ. ಫಕೀರ ಸಮ್ಮುಖಕ್ಕೆ ಬಂದೊಡನೆಯೇ ರಾಯ ಊಳಿಗದವರನ್ನು ದೂರ ಅಟ್ಟಿ, ಬಾಗಿಲು ಮುಚ್ಚಿಕೊಂಡನು.

'ಸುದ್ದಿಯೇನು, ವೆಂಕಟ?'

ಫಕೀರ ಗಡ್ಡಮೀಸೆ ಎಳೆದು ತೆಗೆದನು. ಈಗ ಅವನು ಫಕೀರನಲ್ಲ; ರಾಯನ ನೆಚ್ಚಿನ ಬೇಹುಗಾರರಲ್ಲಿ ಒಬ್ಬನಾದ ವೆಂಕಟ; ಈಗ ತಾನೆ ವಿಜಾಪುರದಿಂದ ಮುದಗಲ್ಲಿಗೆ ಬಂದಿದಾನೆ, ಅರಸನ ಭೇಟಿಯಾಗಲು.

'ಆದಿಲ್‌ಷಹನಿಗೆ ಅಸದಖಾನ್ ಮಂಕುಬೂದಿ ಎರಚಿದಾನೆ'

'ಅದೇನು?'

'ತನಗೆ ವಿರೋಧಿಯೂ, ಸುಲ್ತಾನನಿಗೆ ವಿಶ್ವಾಸಿಯೂ ಆದ ಸಲಬತ್‌ಖಾನನನ್ನು ಕೊನೆಗಾಣಿಸಿ ತಾನು ಮೇಲೇರಬೇಕೆಂದು ಅಸದನ ಹಂಚಿಕೆ. ಸ್ವಾರ್ಥಸಾಧನೆಗಾಗಿಯೆ ಅಸದ ಇಲ್ಲಿಗೆ ಬಂದುದು.'

'ವಿರೂಪಾಕ್ಷ. ವಿರೂಪಾಕ್ಷ' ರಾಯ ಕಂಗಾಲಾದನು. ಅಸದನಲ್ಲಿ ತಾನು ಈಚೆಗೆ ಪಟ್ಟ ಸಂದೇಹ ದೃಢವಾಯ್ತು.

ಅರಮನೆಗೆ ಸನಿಹದ ಸದನವೊಂದರಲ್ಲಿ ಬೀಡುಬಿಟ್ಟಿದ್ದ ಅಸದನನ್ನು ಹೆಡಮುರಿಗೆ ಕಟ್ಟಿ ಹಿಡಿತರಲು ಕೂಡಲೆ ರಾಜಾಜ್ಞೆಯಾಯಿತು. ರಾಜಭಟರು ಅಸದನ ಸದನವನ್ನು ಸುತ್ತುಗಟ್ಟಿದರು; ಒಳಹೊಕ್ಕರು. ಹಾಯ್, ಹಾಯ್. ಗಿಳಿಯುಪಂಜರದೊಳಿಲ್ಲ; ಮಂಗಮಾಯವಾಯಿತಲ್ಲ. ತನ್ನ ಕುತಂತ್ರದ ದುಷ್ಪರಿಣಾಮದ ಬಗೆಗೆ ಭೀತನಾಗಿದ್ದ ಅಸದ ಹಿಂದಣ ರಾತ್ರಿಯೆ ಪರಾರಿ.

* * * *

'ಸುದ್ದಿ ಕಳುಹದೇ, ಸದ್ದುಗದ್ದಲವಿಲ್ಲದೇ ಬಂದಿದೀರಲ್ಲ, ಅಸದಖಾನ್.'

'ಖಾವಂದ್ ಜೀವಭಯದಿಂದ ಓಡಿ ಬಂದೆ. ವಿಜಯನಗರದ ರಾಯರನ್ನು ನಂಬಲೇಬಾರದು, ಬಾರದು.'

'ಓ ಹೋ'

'ಕೃಷ್ಣದೇವರಾಯ ಸಲಬತ್‌ಖಾನನನ್ನು ಕೊಲಿಸಿದಾನೆ. ನಾನು ವೈಮರೆತಿದ್ದರೆ ನನಗೂ ಅದೇ ಗತಿ. ಖಾವಂದರ ಪಾದಸೇವೆ ಮಾಡಲೆಂದು ಜೀವ ಉಳಿಸಿಕೊಳ್ಳಲು ರಾತ್ರೋರಾತ್ರಿ ಓಡಿಬಂದೆ.'

'ಯಾ ಅಲ್ಲಾ. ಸಲಬತ್‌ಖಾನ್ ಕೊನೆಗಂಡನೆ? ಸಲಬತ್‌ಖಾನನನ್ನು ನಿಷ್ಕಾರಣವಾಗಿ ಕೊಲಿಸಿದವನನ್ನು ನಂಬುವುದು ಹೇಗೆ?'

'ಖಾವಂದರೂ ರಾಯನ ಭೇಟಿಗೆ ಹೋಗಬಾರದು. ಹೋದರೆ ತಮ್ಮ ಪ್ರಾಣಕ್ಕೂ ಗಂಡಾಂತರ.'

ಮುದಗಲ್ಲಿನ ಸುದ್ದಿ ಆದಿಲ್‌ಷಹನಿಗೇನು ಗೊತ್ತು; ಅಸದನ ಮಾತೇ ನಿಜವೆಂದು ನಂಬಿದ. ಮೊದಲು ತೀರ್ಮಾನಿಸಿದ್ದಂತೆ ವಿಜಯರಾಜ್ಯದ ಗಡಿಯಲ್ಲಿ ರಾಯನ ಭೇಟಿಗಾಗಿ ಹೋಗಲೇ ಇಲ್ಲ.

ಅಸದನಿಗೆ ಮನಸ್ಸಿನಲ್ಲಿ ಪುಕುಪುಕು. ತನ್ನ ಕೃತ್ರಿಮ ಸಂಧಾನ ಸುಲ್ತಾನನಿಗಾದರೂ ತಿಳಿಯದೆ ಹೋಗದು. ರಾಯನಿಂದ ಓಡಿಹೋದಂತೆ, ಸುಲ್ತಾನನಿಂದಲೂ ದೂರ ಓಡುವುದೇ ಕ್ಷೇಮ. ರಾಯನೊಡನೆ ಸಂಧಾನ ವಿಫಲವಾಗಿ, ಮತ್ತೊಂದು ಯುದ್ಧ ಸನ್ನಿಹಿತವೆಂದೂ ಅದಕ್ಕಾಗಿ ಈಗಿನಿಂದ ದಂಡುಕಟ್ಟತೊಡಗಬೇಕೆಂದೂ, ತಾನು ಬೆಳಗಾವಿಗೆ ಹೋಗಿ ಸಾಧ್ಯವಾದಷ್ಟು ದೊಡ್ಡ ದಳ ಕಟ್ಟುವುದಾಗಿಯೂ ಅಸದಖಾನ್ ಸುಲ್ತಾನನಿಗೆ ಹೇಳಿ ಬೆಳಗಾವಿಗೆ ನಿರ್ಗಮಿಸಿದ; ಸುಲ್ತಾನನಿಂದ ದೊರೆಯುವಷ್ಟು ಧನಕನಕ ಜವಾಹಿರಿಗಳನ್ನು ಒಯ್ಯಲು ಮರೆಯಲಿಲ್ಲ. ಅಸದಖಾನ್ ಬೆಳಗಾವಿಗೇನೋ ತೆರಳಿದ; ಸ್ವಸೈನ್ಯವನ್ನೂ ಬಲಗೊಳಿಸಿದ. ಇವೆಲ್ಲ ಸ್ವಾಮಿಕಾರ್ಯಕ್ಕಾಗಿ ಅಲ್ಲ; ಸ್ವಕಾರ್ಯಕ್ಕಾಗಿ. ತಾನೆಸಗಿದ

ಕುತಂತ್ರದಿಂದ ವಿಜಾಪುರ ಸೇನಾನಿಗೆ ಮರಣದಂಡನೆಯಾಯಿತೆಂಬುದು ಸುಲ್ತಾನನಿಗೆ ತಿಳಿಯದೆ ಹೋದೀತೆ; ತಿಳಿದ ಮೇಲೆ ತನಗೆ ದಂಡನೆಯಾಗದಿದ್ದೀತೆ! ಅದಕ್ಕಾಗಿ ಸ್ವರಕ್ಷಣೆ. ಮುಂದೆ ಆದಿಲ್‌ಷಹ ಅಸದಖಾನನನ್ನು ಕರೆ ಕಳುಹಿದಾಗ ಅಸದಖಾನ್ ಪ್ರಭುವಿನ ಆಜ್ಞೆಯನ್ನು ಪಾಲಿಸಲೇ ಇಲ್ಲ; ದುರ್ಗದ್ವಾರವನ್ನು ಮುಚ್ಚಿಕೊಂಡು ಕುಳಿತ. ತನ್ನ ದ್ರೋಹಕ್ಕೆ ಯಾವ. ಶಿಕ್ಷೆಯೋ ಎಂದು ಅವನಿಗೆ ದಿಗಿಲು.

ಆದಿಲ್‌ಷಹ ಅಸದಖಾನನೊಂದಿಗೆ ಹೇಳಿಕಳುಹಿದ್ದಂತೆ ರಾಯ ಪಡೆಗೊಂಡು ರಾಜ್ಯದ ಗಡಿಗೆ ಹೋದನು; ಆದಿಲ್‌ಷಹನ ಸುಳಿವೇ ಇಲ್ಲ. ಅಸದಖಾನನಿಂದ ತಾನು ಎರಡು ಬಾರಿ ವಂಚಿತನಾದೆ; ಸಲಬತ್‌ಖಾನನಿಗೆ ನಿಷ್ಕಾರಣ ಮರಣದಂಡನೆ; ಈಗ ಆದಿಲ್‌ಷಹನೊಡನೆ ಯುದ್ಧನಿಲ್ಲಲೆಂದು ಇಷ್ಟು ದೂರ ಬಂದುದು; ರಾಯ ಕೋಪದಿಂದ ಕಂಪಿಸಿದನು. ಆದಿಲ್‌ಷಹನಾದರೂ ನದೀತೀರಕ್ಕೆ ಬಂದು ಕಾದಿರುವೆನೆಂದು ಹೇಳಿ ಕಳುಹಿದ ಮೇಲೆ ಬಾರದೆ, ವಚನಭಂಗ ಮಾಡಿದನಲ್ಲ. ವಚನಭಂಗಕ್ಕೆ ಶಿಕ್ಷೆಯೀಯದಿದ್ದರೆ ತನ್ನ ಗೌರವಕ್ಕೇ ಚ್ಯುತಿ.

ಕೃಷ್ಣದೇವರಾಯ ಪಡೆಗೊಂಡು ವಿಜಾಪುರರಾಜ್ಯದಲ್ಲಿ ಬಿರುಗಾಳಿಯಂತೆ ನುಗ್ಗಿದನು. ದಾರಿಯಲ್ಲಡ್ಡವಾದ ದುರ್ಗಭಿತ್ತಿಗಳನ್ನೆಲ್ಲ ನೆಲಸಮ ಮಾಡಿದನು. ಹಿಂದಣ ಬಹಮನಿಸುಲ್ತಾನರ ರಾಜಧಾನಿ ಕಲಬುರ್ಗಿಯ ಮುತ್ತಿಗೆ ಯಾಯಿತು; ಕೆಲವು ದಿನಗಳ ನಿಕರದ ಕಾಳಗ ನಡೆಯಿತು; ದುರ್ಗಾಧಿಪತಿ ಮಡಿದನು. ಅವನ ತಲೆಯನ್ನು ಈಟಿಗೆ ಚುಚ್ಚಿ, ಈಟಿಯನ್ನು ಉದ್ದಗೋಲಿಗೆ ಕಟ್ಟಿ, ಮೇಲೆತ್ತಿ ಹಿಡಿಯಲಾಯ್ತು. ದುರ್ಗಾಧಿಪತಿಯ ಅವಸಾನದಿಂದ ಕಲಬುರ್ಗಿಯ ದಂಡಾಳುಗಳು ಧೃತಿಗೆಟ್ಟು ಶರಣಾಗತರಾದರು. ದುರ್ಗ ಸ್ವಾಧೀನವಾಯ್ತು. ಕೋಟೆಯನ್ನು ನೆಲಸಮ ಮಾಡಿಸಲಾಯ್ತು. ಕ್ರೋಧತಪ್ತನಾಗಿದ್ದ ಕೃಷ್ಣದೇವರಾಯ ವಿಜಯಸಾಮ್ರಾಜ್ಯಕ್ಕೆ ಶತಮಾನಗಳಿಂದ ಮುಳ್ಳಾಗಿದ್ದ

ವಿಜಾಪುರರಾಜ್ಯವನ್ನೇ ಉಧ್ವಸ್ತಗೊಳಿಸುವ ಪ್ರಬಲಾಕಾಂಕ್ಷೆಯಿಂದ ಜೈತ್ರಯಾತ್ರೆಯನ್ನು ಮುಂದುವರಿಸಬಯಸಿದನು. ಆದರೆ ಸಾಳುವ ತಿಮ್ಮನ ಸೂಕ್ತಾಲೋಚನೆ ನಿವಾರಿಸಿತು :

ಇತರ ಸುಲ್ತಾನರು ಸದ್ಯಕ್ಕೆ ರಾಯನಲ್ಲಿ ವಿಶ್ವಾಸ ಪ್ರದರ್ಶನ ಮಾಡುತ್ತಿದ್ದರೂ ಇಂದು ವಿಜಾಪುರ ವಿನಾಶವಾದರೆ ನಾಳೆ ತಮ್ಮ ರಾಜ್ಯಗಳಿಗೂ ಕಂಟಕ ಬಂದೀತೆಂಬ ಮುಂದಾಲೋಚನೆಯಿಂದ ಒಂದುಗೂಡಿ ಆದಿಲ್‌ಷಹನಿಗೆ ನೆರವಾಗುವುದು ಖಂಡಿತ. ಐವರು ಸುಲ್ತಾನರು ಒಂದುಗೂಡಿದರೂ ನಾವೇನೂ ಭಯಗೊಳ್ಳಬೇಕಿಲ್ಲ. ಆದರೆ ನೀರಿನ ಅಭಾವ ದಿಗಿಲುಗೊಳಿಸುವುದೇ ಸರಿ. ಕರ್ಣಾಟಕಸೇನೆ ಮುಂದುವರಿದರೆ, ಹಿಂದಿನ ಬಾರಿ ವಿಜಾಪುರ ಸರೋವರಗಳ ನೀರನ್ನು ಹೊರಹಾಯಿಸಿ ಬರಿದು ಮಾಡಿದಂತೆ ಸುಲ್ತಾನರು ಈ ಬಾರಿಯೂ ಎಲ್ಲ ಕೆರೆಕಟ್ಟೆಗಳನ್ನು ಬರಿದಾಗಿಸುವರು. ನೀರಿಲ್ಲದೆ ಸೇನೆ ಬದುಕುವುದೆಂತು ! ದಂಡಯಾತ್ರೆಯನ್ನು ಮುಂದುವರಿಸುವುದು ಬೇಡ.

ರಾಯ ಅನುಮೋದಿಸಿದನು. ವಿಜಾಪುರರಾಜ್ಯವನ್ನು ಸೇನೆಯಿಂದ ಜಯಿಸಲು ಅನಾನುಕೂಲವಾದರೆ ಬೇರಾವ ರೀತಿಯೂ ಇಲ್ಲವೆ ? ಇದೆ! ಬುದ್ಧಿಕೌಶಲ್ಯವಿದ್ದಲ್ಲಿ ಒಂದಲ್ಲ ಹತ್ತು ಹಾದಿ ತೆರೆಯುತ್ತವೆ.

ದಖನ್ನಿನ ಮುಸಲ್ಮಾನೀ ರಾಜ್ಯ ಒಡೆಯುವುದಕ್ಕೆ ಮೊದಲು ಆ ರಾಷ್ಟ್ರಕ್ಕೆ ಏಕಛತ್ರಾಧಿಪತಿಯಾಗಿದ್ದ ಬಹಮನೀ ರಾಜಮನೆತನದ ಮೂವರು ರಾಜಕುಮಾರರನ್ನು ಆದಿಲ್‌ಷಹ ಕಲಬುರ್ಗಿಯಲ್ಲಿ ಬಂಧಿಸಿಟ್ಟಿದ್ದನು. ಬಹಮನೀರಾಜ್ಯ ಐದು ಭಾಗವಾಗಿ ಒಡೆದು ಒಂದೊಂದು ಭಾಗಕ್ಕೂ ಒಬ್ಬೊಬ್ಬ ಸ್ವತಂತ್ರ ಸುಲ್ತಾನನಿದ್ದರೂ, ಹೆಸರಿಗೆ ಮಾತ್ರ ಬಹಮನೀವಂಶಿಕನೇ ಅರಸು. ಹಿಂದಣ ಬಹಮನೀ ಅರಸನ ವೇಶ್ಯಾಪುತ್ರನಿಗೆ ಆದಿಲ್‌ಷಹ ತನ್ನ ತಂಗಿಯನ್ನು ಕೊಟ್ಟು ಮದುವೆ ಮಾಡಿದ್ದನು. ಈತನನ್ನೇ ಬಹಮನೀ ಅರಸನೆಂದು ಎತ್ತಿ ಕಟ್ಟಿ, ಇವನ ಮೂಲಕ ಉಳಿದ ನಾಲ್ವರು ಸುಲ್ತಾನರ ಮೇಲೆ ತನ್ನ ಪ್ರಭಾವವನ್ನೂ, ಪ್ರಭುತ್ವವನ್ನೂ ನೆಲೆಗೊಳಿಸುವುದು ಆದಿಲ್‌ಷಹನ ಆಕಾಂಕ್ಷೆ. ಇದೇ

ಮಾರ್ಗವನ್ನು ರಾಯನೂ ಅನುಸರಿಸಬಯಸಿದನು. ಬಹಮನಿಯ ನೈಜರಾಜಕುಮಾರರಲ್ಲಿ ಹಿರಿಯನಿಗೆ ರಾಯ ಪಟ್ಟಗಟ್ಟಿದನು. ಈ ಅರಸೊತ್ತಿಗೆಗೆ ಬಹಮನೀರಾಜಕುಮಾರನು ಕೃಷ್ಣದೇವರಾಯನಿಗೇ ಕೃತಜ್ಞನಾಗಿರಬೇಕಾಗಿದ್ದು, ಈತನ ಮೂಲಕ ರಾಯ ದಖ್ಖನಿನ ಐವರು ಸುಲ್ತಾನರ ಮೇಲೂ ಪ್ರಭಾವ ಬೆಳೆಸುವ ಹಂಚಿಕೆ ಹಾಕಿದನು. ಸುತ್ತ ಮುತ್ತಣ ಸಾಮಂತರೂ, ನಾಯಕರೂ ಹೊಸ ಅರಸನನ್ನು ಮಾನ್ಯಮಾಡಿ ಗೌರವಿಸಿದರು. ರಾಯನಿಗೆ ಹೆದರಿ ಆದಿಲ್‌ಷಹನೂ ಈತನನ್ನೇ ಬಾದಷಹನಾಗಿ ಅಂಗೀಕರಿಸಬೇಕಾಯ್ತು ನೈಜ ಅರಸುಗುವರರಲ್ಲಿ ಹಿರಿಯನನ್ನು ಸಿಂಹಾಸನಕ್ಕೇರಿಸಿದುದಲ್ಲದೆ, ಉಳಿದ ಇಬ್ಬರು ಅರಸುಗುವರರನ್ನು ತನ್ನೊಂದಿಗೆ ವಿಜಯನಗರಕ್ಕೆ ಗೌರವದಿಂದ ಕರೆದೊಯ್ದು, ಒಂದು ಲಕ್ಷ ವರಹಗಳ ವಾರ್ಷಿಕ ಸಂಭಾವನೆಯನ್ನು ಕೊಡತೊಡಗಿದನು. ಯವನರಾಜ್ಯಸ್ಥಾಪನಾ ಚಾರ್ಯ ಎಂಬ ಬಿರುದು ತಳೆದನು.

ಅಸದಖಾನನ ಕಿರುಕುಳಗಳಿಗೆ ಇನ್ನೂ ಕೊನೆ ಇಲ್ಲ. ವಿಶ್ವಾಸಘಾತಕನಾಗಿ ಸುಲ್ತಾನನ ಆಶ್ರಯವನ್ನೂ ಕಳೆದುಕೊಂಡ ಅಸದಖಾನ್ ಬೆಳಗಾವಿದುರ್ಗವನ್ನು ಭದ್ರಪಡಿಸಿಕೊಂಡು, ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು; ಬೆಳಗಾವಿಯ ಸುತ್ತಣ ಪ್ರದೇಶಗಳಿಗೆ ಅವನೀಗ ನಿರಂಕುಶಪ್ರಭು. ತಾನು ಕರತೆರಿಗೆಗಳನ್ನು ವಸೂಲುಮಾಡುವ ಪ್ರದೇಶವನ್ನು ಕೊಂಚಕೊಂಚವಾಗಿ ವಿಸ್ತೃತಗೊಳಿಸಿದನು; ಇದಾದರೂ ಸುಲ್ತಾನ ಆದಿಲ್‌ಷಹನ ಕಣ್ಣು ಕೆಂಪ ಗಾಗುವಷ್ಟು ದೂರ ವಿಸ್ತರಿಸುವಹಾಗಿಲ್ಲ. ದಳಪತಿಯಾಗಿದ್ದವನು ವಿಜಾಪುರಸೇನಾನಿಯೇ ತಾನಾಗಬೇಕೆಂಬ ಹಂಬಲ; ನ್ಯಾಯರೀತಿಯಲ್ಲಿ ತನ್ನ ಸಾಮರ್ಥ್ಯಪ್ರದರ್ಶನಮಾಡುತ್ತ ಸಾಗಿದ್ದರೆ ಚತುರನೂ ಕುಶಲನೂ ಆದ ಅಸದಖಾನ್ ಮೇಲಿಮೇಲೆ ಏರುತ್ತಿದ್ದನೇನೋ ಹೌದು. ಆದರೆ ಕೃತ್ರಿಮ ಮಾರ್ಗ ಅವನ ಹುಟ್ಟುಗುಣವಾಗಿದ್ದು, ಯಾವ ಕಾರ್ಯೋದ್ಯುಕ್ತನಾದರೂ ಕೃತ್ರಿಮತೆಯೇ ಮೇಲ್ವಾಯ್ದು ಬರುತ್ತಿತ್ತು; ಸಲಬತ್‌ಖಾನನನ್ನು ಕೃತ್ರಿಮವಾಗಿ ಕೊಲಿಸಿ,

ಅವನು ನಿಂತಿದ್ದ ಸುಲ್ತಾನಾಶ್ರಯದ ಅಸ್ತಿವಾರವೆ ಕುಸಿತಿತ್ತು; ಈಗ ಎಷ್ಟು ಹೆಣಗಿದರೂ ಪ್ರಾಬಲ್ಯಕ್ಕೆ ಅವಕಾಶವೇ ಇಲ್ಲ. ಅಸದನೇನೂ ಸುಮ್ಮನೆ ಇರುವಾತನಲ್ಲ. ಆದಿಲ್‌ಷಹನ ಮನವೊಲಿಸಲು ಹಲವಾರು ಪ್ರಯತ್ನ ಮಾಡಿದ; ಎಲ್ಲ ನಿಷ್ಫಲ. ತಾನು ಸುಲ್ತಾನನ ಕೈಗೆ ಸಿಕ್ಕರೆ ತನ್ನ ಶಿರಚ್ಛೇದನವಾಗುವ ಸೂಚನೆಗಳು ಪ್ರಬಲತರವಾದವೇ ವಿನಹ ಸುಲ್ತಾನನ ಮನವೊಲಿಯಲಿಲ್ಲ. ವಿಜಾಪುರರಾಜ್ಯವನ್ನು ವಿಸ್ತರಿಸಿ ಮಹತ್ವಾಕಾಂಕ್ಷಿಯಾದ ಆದಿಲ್‌ಷಹನನ್ನು ಪ್ರಸನ್ನಗೊಳಿಸಬಹುದು. ಆದರೆ ರಾಜ್ಯವಿಸ್ತಾರ ಎತ್ತಣ ದೆಸೆಗೆ? ಇತರ ನಾಲ್ವರು ಸುಲ್ತಾನರು? ಊಹ್ಞು. ದಕ್ಷಿಣಕ್ಕೆ ಕರ್ಣಾಟಕ ಸಾಮ್ರಾಜ್ಯ! ಕೃಷ್ಣದೇವರಾಯನೆಂದರೆ ಅಸದಖಾನನಿಗೆ ಸಿಂಹಸ್ವಪ್ನ. ಗೋವೆ! ಓಹ್, ಗೋವೆ! ಪೋರ್ಚುಗೀಸ್ ಠಾಣೆ; ಅದನ್ನೇ ಮುತ್ತಿದರಾಯ್ತು.

ಗೋವೆಯನ್ನು ಜಯಿಸುವುದರಿಂದ ವಿಜಾಪುರದ ಶತ್ರು ರಾಯನಿಗೆ ಪೋರ್ಚುಗೀಸರ ನೆರವು ತಪ್ಪಿ ಬಲ ಕ್ಷೀಣಿಸುವುದು; ವಿಜಾಪುರದ ವಿದೇಶ ವ್ಯಾಪಾರ ವರ್ಧಿಸಿ ಹೊನ್ನ ಹೊಳೆ ನಾಡೊಳಗೆ ಹರಿಯುವುದು; ಎಂದು ಮುಂತಾಗಿ ಕಾರಣಗಳನ್ನಿತ್ತು, ಗೋವೆಯನ್ನು ಮುತ್ತಲು ಆದಿಲ್‌ಷಹ ದಂಡು ಕಳುಹಬೇಕೆಂದೂ ತಾನೂ ಪಡೆಗೊಂಡು ಉಭಯ ಬಲಕ್ಕೆ ಪಡೆವಳನಾಗಿ, ಗೋವೆಯನ್ನು ವಿಜಾಪುರಕ್ಕೆ ಗೆದ್ದು ಕೊಡುವುದಾಗಿಯೂ ಅಸದಖಾನ್ ಸುಲ್ತಾನನಿಗೆ ಓಲೆ ಕಳುಹಿದನು. ಕೃಷ್ಣದೇವರಾಯನ ಆಘಾತಗಳಿಂದ ತಣ್ಣಗಾಗಿದ್ದ ಆದಿಲ್‌ಷಹನಿಗೆ ಇಂಥ ಯೋಜನೆಯಿಂದ ಬಾಯಿ ನೀರೂರಿತೇನೋ ಹೌದು; ಆದರೆ ಅಸದನನ್ನು ನಂಬುವುದು ಹೇಗೆ! ಬೆಳಗಾವಿಯ ಒಡೆಯನಾಗಿದ್ದು ಗೋವೆಗೂ ತನ್ನ ಒಡೆತನ ಬೆಳೆಯಲೆಂದು ರಣಕಾಳಿಗೆ ಉಣಿಸಾಗಿ ವಿಜಾಪುರ ಸೈನಿಕರನ್ನು ಕೇಳುತ್ತಿರುವನೇನೋ! ಆದಿಲ್‌ಷಹನದು ಪ್ರತ್ಯಪಾಯ; ಅಸದನಿಗೆ ಓಲೆ ಕಳುಹಿದ.

'ಅಸದ್! ನಿನ್ನ ಸ್ವಾಮಿನಿಷ್ಠೆಯನ್ನು ಪ್ರದರ್ಶಿಸಲು ಯೋಗ್ಯಸಮಯ ಒದಗಿದೆ. ನೀನು ಕಾರ್ಯಶೀಲನಾಗಿ

ರಾಜ್ಯಸೇವೆ ಮಾಡಿದರೆ ಸೇನಾನಿ ಸಲಬತ್‌ಖಾನನ ದುರ್ಮರಣಕ್ಕೆ ಕಾರಣ ಎಲ್ಲರಿಗೂ ಮರೆತುಹೋಗುವುದು. ನೀನು ನನ್ನ ಪ್ರತಿನಿಧಿಯಾಗಿ ಬೆಳಗಾವಿಯ ಆಡಳಿತ ನಡೆಸುತ್ತ ಸಾಕಷ್ಟು ಬಲಸಂವರ್ಧನೆ ಮಾಡಿದ್ದೀ; ನಿನ್ನ ವಶದಲ್ಲಿರುವ ಪಡೆ ಗೋವೆಯಂಥ ಸಣ್ಣ ಪ್ರದೇಶದ ವಿಜಯಕ್ಕೆ ಸಾಲದೆ! ಅದೂ ನಿನ್ನಂಥ ಚತುರ ಚಾಣಕ್ಯನ ನಾಯಕತ್ವದಲ್ಲಿರುವಾಗ. ವಿಜಾಪುರದ ದಳಪತಿಯಾಗಿ ನೀನು ಗೋವೆಯನ್ನು ಗೆಲಿಸಿಕೊಟ್ಟದ್ದಕ್ಕಾಗಿ ನಿನಗೆ ಉಚಿತ ಗೌರವ, ಸಂಭಾವನೆಗಳನ್ನು ದಯಪಾಲಿಸುವುದರಲ್ಲಿ ಏನೂ ಸಂದೇಹಪಡಬೇಡ'

ಅಸದಖಾನ್ ಹಲ್ಲುಗಳನ್ನು ಕಟಕಟನೆ ಕಡಿಯುತ್ತ, ಸುಲ್ತಾನನ ಓಲೆಯನ್ನು ಹರಿದೆಸೆದನು. ನನ್ನ ಸಾಮರ್ಥ್ಯ, ಚಾತುರ್ಯಗಳಿಂದ ಜಯಿಸಿದ ಗೋವೆಯನ್ನು ಈ ದಡ್ಡ ಆದಿಲ್‌ಷಹನ ಕೈಗೊಪ್ಪಿಸಬೇಕೇನು? ಹೊನ್ನ ಗಣಿಯನ್ನು ಕೈಗೆಕೊಟ್ಟು, ನಾಲ್ಕು ಗಟ್ಟಿ ಚಿನ್ನವನ್ನು ಸಂಭಾವನೆ ಹೊಂದಲು ನಾನೇನು ಮೂರ್ಖನೆ? ನಾ ಗೆಲ್ಲುವ ಗೋವೆ ನನಗೇ! ಗೋವೆಯನ್ನು ಗೆಲ್ಲುವೆ, ಪೋರ್ಚುಗೀಸರ ನೆರವಿನಿಂದ ಆದಿಲ್‌ಷಹನನ್ನೇ ಗೆದ್ದು, ವಿಜಾಪುರದ ಸುಲ್ತಾನನಾಗುವೆ. ನಂತರ ವಿಜಯಸಾಮ್ರಾಜ್ಯವನ್ನು ಮುರಿದು ಮುಕ್ಕಿ ದಖ್ಖನಿನ ಬಾದಷಹನಾಗುವೆ. ಜೈ ಅಸದಖಾನ್.

ಗೋವೆಯ ಆಕ್ರಮಣಕ್ಕಾಗಿ ಅಸದಖಾನ್ ಸಿದ್ಧತೆ ನಡೆಸುತ್ತಿದ್ದ ಸುದ್ದಿ ಬೇಹುಗಾರರ ಮೂಲಕ ಕೃಷ್ಣದೇವರಾಯನಿಗೆ ತಲುಪಿತು. ಅಸದಖಾನ್ ಜಯಶೀಲನಾದುದಾದರೆ ತನಗೆ ಹಿರಿಯ ಬೆಂಬಲವಾಗಿದ್ದ ಪೋರ್ಚುಗೀಸರ ನೆರವು ತಪ್ಪುವುದೇ ಹೌದು; ಓರ್ಮಜ್ಡ್ ಮುಂತಾದೆಡೆಗಳಿಂದ ಗೋವೆಗೆ ಆಮದಾಗುವ ಕುದುರೆಗಳ ಸರಬರಾಯಿಯೂ ತನಗೆ ನಿಂತುಹೋಗುವುದು. ಇದೆಂಥ ಆಲೋಚನೆ ಹುಡುಕಿದ ಅಸದಖಾನ್! ತಾನು ಸುಮ್ಮನಿದ್ದರಾದೀತೇ! ಗೋವೆ ಅಸದನ ಕೈವಶವಾಗದಂತೆ ತನ್ನ ನೆರವನ್ನು ಪೋರ್ಚುಗೀಸರಿಗೆ ನೀಡಲೇಬೇಕು. ಅಸದಖಾನ್ ಕಪಟನಾಟಕ

ಚತುರ; ತಾನು ಯಾವುದಾದರೂ ಜಿಪ್ಪ್ಯ ದಳಪತಿಯನ್ನು ತಳುಹಿದರೆ ಇನ್ನೇನು ನಾಟಕ ಆಡಿಸಿಬಿಡುತ್ತಾನೋ. ಎಲ್ಲರನ್ನೂ ನುಂಗುವ ಅಸದಖಾನನನ್ನು ನುಂಗಲು ಮಂತ್ರಿ ಸಾಳುವ ತಿಮ್ಮರಸೇ ಸರಿ.

ಸಾಳುವ ತಿಮ್ಮನ ದಂಡನಾಯಕತ್ವದಲ್ಲಿ ಚಿಕ್ಕದೊಂದು ಅಶ್ವಸೈನ್ಯ ಗೋವೆಯ ದೆಸೆ ಸಾಗಿತು. ಅಸದಖಾನ್ ಮುತ್ತಿಗೆಹಾಕುವ ಮೊದಲೇ ತನ್ನ ನೆರವು ಪೋರ್ಚುಗೀಸರಿಗೆ ದೊರೆತಿರಬೇಕು; ರಕ್ತಪಾತವಿಲ್ಲದೆ ಅಸದನನ್ನು ಬಲೆಗೆ ಹಾಕಿಕೊಳ್ಳುವುದು ಸಾಧ್ಯವಾದರೆ ಅದೂ ಲೇಸು. ಕರ್ಣಾಟಕದ ರಾವುತರು ಗೋವೆಯ ದೆಸೆ ದೌಡಾಯಿಸಿದರು. ಅಗೋ ಗೋವೆಯಕೋಟೆ!

ಗೋವೆಗೆ ಪೋರ್ಚುಗೀಸ್ ದುರ್ಗಾಧಿಪತಿ ಹೊಸಬನೊಬ್ಬ ಬಂದಿದ್ದ. ದುರ್ಬೀನು ಹಾಕಿಕೊಂಡು ನೋಡು ತ್ತಿದ್ದವನಿಗೆ ಆಸತಿ ದೂರದಲ್ಲಿ ಚಿಕ್ಕದೊಂದು ಅಶ್ವಸೈನ್ಯ ದೌಡಾಯಿಸಿಬರುತ್ತಿರುವುದು ಕಂಡಿತು. ಹೋ! ಈ ಕರಿಯ ಜನ ಇದ್ದಕ್ಕಿದ್ದಂತೆ ದಾಳಿಮಾಡಿ ದುರ್ಗಾಕ್ರಮಣಮಾಡುವ ಹಂಚಿಕೆ ನಡೆಸಿದಾರೆ. ಇವರು ನೈತಿಳಿಯುವಮೊದಲೇ ಇವರನ್ನೆಲ್ಲ ಸುಟ್ಟುಹಾಕಿಸಿಬಿಡಬೇಕು. ದುರ್ಗಭಿತ್ತಿಯ ಮೇಲಿದ್ದ ಗೋಲಂದಾಜಪಡೆ ಮದ್ದುತುಂಬಿಕೊಂಡು ಸನ್ನದ್ಧ ವಾಯ್ತು; ತುಪಾಕಿ ಸಿಪಾಯಿಗಳು ಗುಂಡುತುಂಬಿಕೊಂಡು ಸಿದ್ಧರಾದರು.

ವಿಜಯನಗರದ ಪತಾಕೆ ಕಂಡೊಡನೆಯೇ ದುರ್ಗದ್ವಾರ ತೆರೆಯುವುದೆಂಬ ಘನವಿಶ್ವಾಸದಲ್ಲಿ ಸಾಳುವ ತಿಮ್ಮ ಅಶ್ವಾರೋಹಿಗಳ ನಡುವೆ ದುರ್ಗಾಭಿಮುಖವಾಗಿ ಸಾಗುತ್ತಿದಾನೆ.

“ ಢಂ! ”

ಸಹಸವಾರನೊಬ್ಬ ಧೊಸಕ್ಕನೆ ಕುಸಿದುಬಿದ್ದ. ಏನು? ಏನು?

ಢಂ! ಢಂ! ಢಂ!........

ಅಶ್ವಾರೋಹಿಗಳು ಧಡಲ್‌ಧಡಲ್ಲನೆ ಬೀಳತೊಡಗಿದರು. ತೋಪುಗಳು ಆರ್ಭಟಿಸತೊಡಗಿದವು. ಅಶ್ವಾರೋಹಿಗಳು ಹಿಮ್ಮುಖವಾಗಿ ಚದುರಿ ಓಡಿದರು. ಗೊಂದಲದಲ್ಲಿ ಸಾಳುವ ತಿಮ್ಮನ ಠಾಕಣವೂ ದಿಕ್ಕುಗೆಟ್ಟು ಓಡಿತ್ತು.

ಚದುರಿದ್ದ ರಾವುತರು ಹರಿದಾರಿ ಹಿಂದೆ ಮತ್ತೆ ಒಕ್ಕೂಡಿದರು. ಏನವಾಂತರ! ಏನಸಾಹುತ! ಅಸದಖಾನನಾಗಲೇ ಗೋವೆಯನ್ನು ಆಕ್ರಮಿಸಿದಾನೇಸು? ಇಲ್ಲದಿದ್ದರೆ ಇಂಥ ಕಾರ್ಯಾಚರಣೆಯೇಕೆ! ಕೊಂಚ ಕಾಲದಲ್ಲೇ ಸುದ್ದಿ ಸಂಗ್ರಹವಾಯ್ತು. ಗೋವೆಗೆ ದುರ್ಗಾಧಿಪತಿಯಾಗಿ ಪೋರ್ಚುಗಲ್‌ನಿಂದ ಹೊಸಬನೊಬ್ಬ ಈಗತಾನೇ ಆಮದಾಗಿ ಬಂದಿದಾನೆಂದು. ಸರಿ, ಮುಂದೇನು ಮಾಡಬೇಕು? ಸಾಳುವ ತಿಮ್ಮ ತಾ ಬಂದ ಸಂದರ್ಭವನ್ನು ವಿವರಿಸಿ ಓಲೆ ಬರೆದು, ಶಾಂತಿಸೂಚಕ ಶ್ವೇತಧ್ವಜವಾಹಕನಾದ ಅಶ್ವಾರೋಹಿಯೊಂದಿಗೆ ಕೊಟ್ಟು ಕಳುಹಿದನು. ಪತ್ರವಾಹಕ ದುರ್ಗದ್ವಾರದಲ್ಲಿ ತಡೆಯಲ್ಪಟ್ಟ, ಅವನ ಓಲೆ ದುರ್ಗಾಧಿಪತಿಗೆ ತಲುಪಿತು.

ಹಿಂದೂಸ್ಥಾನದ ತುಸುಪರಿಚಯವೂ ಇಲ್ಲದ ಹೊಸ ದುರ್ಗಾಧಿಪತಿ. ಇಲ್ಲೂ ಪಕ್ಷ ಪ್ರತಿಪಕ್ಷಗಳು ಇರುವವೆಂದು ಅವನೇನು ಬಲ್ಲ. ಆಹ್! ಈ ಕರಿಯ ಜನವೆಲ್ಲ ಒಂದೇ. ಏನೋ ಕಾರಸ್ಥಾನ ನಡೆಸುತ್ತಿದಾರೆ. ಮಿತ್ರರಂತೆ ನಟಿಸಿ, ಒಂದು ಗುಂಪು ದುರ್ಗಪ್ರವೇಶಮಾಡುವುದು; ಅವರ ಸೈನ್ಯ ಬಂದು ಮುತ್ತಿದಾಗ, ನಮಗೆ ಒಳಗಿಂದೊಳಗೆ ದ್ರೋಹಮಾಡಿ ದುರ್ಗವನ್ನು ಪರಾಕ್ರಾಂತಗೊಳಿಸುವುದು. ಇವರ ಸಂಪರ್ಕವೇ ಬೇಡ.

ಪ್ರತ್ಯುತ್ತರವೇನೂ ಇಲ್ಲವೆಂದು ಪತ್ರವಾಹಕನಿಗೆ ತಿಳಿಸಲಾಯ್ತು. ಅವನು ದುರ್ಗದಿಂದ ನಿರ್ಗಮಿಸುತ್ತಿರುವಾಗ ತಾಕಿದ ಗುಂಡು ಅವನನ್ನು ನೆಲಕ್ಕೊರಗಿಸಿತು. ಅಲ್ಪ ಕಾಲದಲ್ಲೇ ಹದ್ದುಕಾಗೆಗಳ ಗುಂಪು ಅವನ ದೇಹವನ್ನು ಕಿತ್ತು ತಿನ್ನುತ್ತಿದ್ದವು.

ಪತ್ರವಾಹಕ ಸಂಜೆಯಾದರೂ ಹಿಂದಿರುಗದಿರಲು ಸಾಳುವ ತಿಮ್ಮ ಚಿಂತಾಕ್ರಾಂತ. ಮಾರನೆಯ ಅರುಣೋದಯದ

ವೇಳೆ ಇನ್ನೊಂದು ಓಲೆಯನ್ನು ಕಳುಹಿದನು. ದ್ವಿತೀಯ ದೂತ ದುರ್ಗಸಮೀಪದಲ್ಲಿ ಬಿದ್ದಿದ್ದ ಅಶ್ವ, ಆರೋಹಿಗಳ ಶತಛಿದ್ರ ಅಂಗಭಾಗವನ್ನು ಕಂಡು ಬೆಚ್ಚಿದನು. ತನ್ನ ಗತಿಯೂ ಇದೇ ಏನೋ. ಆದರೆ ಸ್ವಾಮಿಕಾರ್ಯ! ದುರ್ಗ ದ್ವಾರದಲ್ಲಿ ನಿಂತನು. ಅವನ ಪತ್ರವನ್ನೂ ಸ್ವೀಕರಿಸದೆ ಹಿಂದಿರುಗಿ ಕಳುಹಬೇಕೆಂದು ದುರ್ಗಾಧಿಪತಿಯ ಆಣತಿ. ದೂತ ಅಂಜುತ್ತಅಂಜುತ್ತ ಅಶ್ವವನ್ನು ಹಿನ್ನಡೆಸಿದನು.

ಢಢ್ !

ದೂತನ ಮೈ ಬೆಮ್ಮನೆ ಬೆವರಿತು. ಗುಂಡು ಬೆನ್ನು ನಾಟಿತೇನೋ ನೋಡಿಕೊಂಡನು. ಇಲ್ಲ, ಇಲ್ಲ. ಮತ್ತೇನು? ಓಹ್ ! ಹಾದಿಯಲ್ಲಿದ್ದ ಕಲ್ಲು ತುಣುಕು ಕುದುರೆಯ ಗೊರಸಿಗೆ ತಾಕಿ, ಢಢ್ ಎಂದು ಎಗರಿಬಿದ್ದಿತ್ತು.

ಅನಿರೀಕ್ಷಿತವಾದ ಗುಂಡಿನ ಮಳೆಯಿಂದ ಇದ್ದ ಚಿಕ್ಕ ಅಶ್ವಸೈನ್ಯದ ಒಂದು ಭಾಗ ವಿನಾಶ. ಈ ತಿಕ್ಕಲು ದುರ್ಗಾಧಿಪತಿ ಮಾತಿಗೇ ಅವಕಾಶ ಕೊಡ. ಇನ್ನು ಮಾಡುವುದೇನು! ಸಾಳುವ ತಿಮ್ಮ ಬೇಸತ್ತು ವಿಜಯನಗರಕ್ಕೆ ಮರಳಿದ.

ಅಲ್ಪಕಾಲದಲ್ಲೇ ಗೋವೆಯ ದುರ್ಗಾಧಿಪತಿಯಿಂದ ಓಲೆ ಬಂತು – ತನ್ನ ಅಜ್ಞ, ದುಡುಕು ವರ್ತನೆಗಾಗಿ ಕ್ಷಮೆಯನ್ನು ಯಾಚಿಸುತ್ತ. ಮತ್ತೆ ಅದೇ ಎಡೆಯ ಬೇಹುಗಾರರ ಸುದ್ದಿ–ಗೋವೆಯ ದುರ್ಗದವರೆಗಿನ ಪೋರ್ಚುಗೀಸ್ ಪ್ರಾಂತವನ್ನು ಅಸದಖಾನ್ ಆಕ್ರಮಿಸಿ, ದುರ್ಗಕ್ಕೂ ಭೀತಿ ತಂದೊಡ್ಡಿದಾನೆಂದು. ಸಾಳುವ ತಿಮ್ಮನ ದಂಡನಾಯಕತ್ವ ದಲ್ಲಿ ಅಸದಖಾನನಿಗೆ ವಿನಾಶಕಾರಿಯಾಗಬಲ್ಲಷ್ಟು ಸೇನೆ ಮತ್ತೆ ಹೊರಟಿತು. ಕನ್ನಡದಂಡು ಪಯಣದ ಮೇಲೆ ಪಯಣ ಬೆಳೆಸುತ್ತ ಪೋರ್ಚುಗೀಸ್ ಪ್ರದೇಶಕ್ಕೆ ಸಾಗಿತು. ಅಸದಖಾನನ ಪ್ರಬಲ ದಾಳಿಯಿಂದ ಗೋವೆಯಕೋಟೆ ಪತನ ವಾಗಲಿತ್ತು. ಕನ್ನಡದಂಡಿನ ಆಗಮನದಿಂದ ರಣರಂಗದ ಬಣ್ಣ ಬದಲಾಯಿಸಿತು. ಅಸದಖಾನನಿಗೆ ಎರಡು ಕಡೆಗಳಿಂದಲೂ

ಆಘಾತ; ದುರ್ಗದ ಮೇಲಿನಿಂದ ಪೋರ್ಚುಗೀಸರ ಆಘಾತ. ಹಿಂಬದಿಯಿಂದ ಕನ್ನಡದಂಡಿನ ಏಟು. ಕನ್ನಡದಂಡು ದಾಳಿ ಮಾಡಿದ ಒಂದು ಗಂಟೆಯ ಕಾಲದಲ್ಲಿ ಅಸದಖಾನ್ ಹಣ್ಣುಹಣ್ಣಾದನು. ಗೋವೆಯ ಗೆಲುವು ತನ್ನ ಮಹತ್ವಾಕಾಂಕ್ಷೆಗೆ ಮೆಟ್ಟಿಲು; ಇದನ್ನು ಜಯಿಸಲಾರದಾದರೆ ಕ್ಷುಲ್ಲಕನಾದ ಬೆಳಗಾವಿಯ ಅಧಿಪತಿಯಾಗಿ ಬದುಕು ನೀಗಬೇಕಾಗುವುದು; ಆದಿಲ್‌ಷಹ ಬೆಳಗಾವಿಯನ್ನೂ ಆಕ್ರಮಿಸುವ ಹಠ ತೊಟ್ಟರೆ ತನಗೆ ಶಿರಚ್ಛೇದನವೇ ಗತಿ; ಅವೆಲ್ಲ ಇರಲಿ; ಈಗ ಯುದ್ಧಮುಖದಿಂದ ಪಲಾಯನಮಾಡುವುದಾದರೂ ಹೇಗೆ! ಇಬ್ಬದಿಯ ಕೆಚ್ಚಿನ ಹೊಡೆತ. ಓಡತೊಡಗಿದುದೇ ಆದರೆ ತನ್ನ ದಂಡು ಚದುರಿ, ಬೆನ್ನಟ್ಟಿ ಬರುವ ಶತ್ರುದಳಗಳಿಗೆ ಸುಲಭದ ತುತ್ತಾಗುವುದು. ಗೆಲುವಿನ ದೆಸೆ ಬರಬಹುದಾದರೆ ನಿಂತು ಹೋರಾಡಿದರೇ! ನಿಕರದ ಕಾಳಗ ಕೈಗೂಡಿತು; ನೆತ್ತರ ಕಾಲುವೆ ಹರಿಯಿತು. ಅಸದಖಾನ್ ಸಸೈನ್ಯನಾಗಿ ನಿಶ್ಶೇಷ; ಆತನ ದಂಡಾಳುಗಳು ಕೆಲವರು ಪಲಾಯನವನ್ನು ಯತ್ನಿಸಿ ಕನ್ನಡಕಟ್ಟಾಳುಗಳಿಂದ ಕಡಿದೊಗೆಯಲ್ಪಟ್ಟರು. ಅಸದಖಾನನ ರುಂಡವನ್ನು ಸಾಳುವ ತಿಮ್ಮ ಕೃಷ್ಣದೇವರಾಯನಿಗೆ ಕಾಣಿಕೆ ಕಳುಹಿದನು. ತಂತ್ರ ಕುತಂತ್ರಗಳ ಪರಂಪರೆಯಿಂದ ತನಗೆ ಹಲವಾರು ಬಾರಿ ಹಾದಿಯ ಮುಳ್ಳಾದ ವಿಶ್ವಾಸಘಾತಕನ ಸಮಾಪ್ತಿ ರಾಯನಿಗೆ ಸಮಾಧಾನವೂಡಿತು. ಗೋವೆಯ ಸಂರಕ್ಷಣೆ ರಾಯನಿಗೆ ಪೋರ್ಚುಗೀಸರ ಮೈತ್ರಿ, ನೆರವುಗಳನ್ನು ದೃಢಗೊಳಿಸಿತು.



---

ಆಳ್ವಾ ಕರ್ಣಾಟಕದೇವಿ



## ಮ ಹಾ ನ ವ ಮಿ

ಶುಕ್ರೋದಯದ ವೇಳೆಗೆ ನಿದ್ರೆಯಿಂದೆಚ್ಚೆತ್ತ ರಾಯ ರೂಢಿಯ ಅಂಗಸಾಧನೆಗಳನ್ನು ಮುಗಿಸಿ, ಮಿಂದು, ಶುಭ್ರವಸನಧಾರಿಯಾಗಿ ಭುವನವಿಜಯಮಹಲಿನ ವಸನನಿರ್ಮಿತವಾದ ಕೊಠಡಿಗೆ ಐತಂದನು. ಈ ಕೊಠಡಿಯಲ್ಲಿ ವಿರೂಪಾಕ್ಷದೇವರ ಪ್ರತಿಮೆ; ಪ್ರತಿಮೆ ಅನರ್ಘ್ಯ ರತ್ನವಜ್ರಾಭರಣ ವಿಭೂಷಿತ. ರಾಯ ವಿರೂಪಾಕ್ಷ ದೇವರಿಗೆ ಪ್ರಣಮಿಸಿ, ಆರಾಧನೆಗೈದನು. ಪೂಜಾವಿಧಿಗಳನಂತರ ಸುತ್ತಲ ಪರದೆಗಳನ್ನು ಮೇಲೇರಿಸಲಾಯ್ತು. ಸಾಲಾಗಿ ನಿಂತಿದ್ದ ಕುರಿಕೋಣಗಳ ದೃಶ್ಯಗೋಚರ. ಬಲಿಕಾರ ಹರಿತವಾದ ಕುಡುಗೋಲನ್ನು ಕೈಲಿ ಹಿಡಿದು ನಿಂತಿದ್ದನು.

ಪೂಜಾರಿ ತೀರ್ಥವನ್ನು ಪ್ರಾಣಿಗಳಿಗೆ ಪ್ರೋಕ್ಷಿಸಿದೊಡನೆಯೆ, ಬಲಿಕಾರ ಕುಡುಗೋಲಿನ ಒಂದೊಂದು ಏಟಿಗೆ ಒಂದೊಂದು ಕತ್ತಿಗೆಯಂತೆ ಉದ್ದಕ್ಕೂ ಪ್ರಾಣಿಗಳ ಕುತ್ತಿಗೆ ಕಡಿದು ಒಟ್ಟಿದನು. ದೇವರಿಗೆ ಬಲಿದಾನ ಮುಗಿಯಿತು. ಬ್ರಾಹ್ಮಣರು ಗುಲಾಬಿ ಹೂಗಳ ದೇವಪ್ರಸಾದವನ್ನು ರಾಯನ ತಲೆಯ ಮೇಲೆ ಬೀರಿದರು. ರಾಯ ಶಿರೋಭೂಷಣವನ್ನು ತೆಗೆದು ನೆಲಕ್ಕಿರಿಸಿ, ದೇವಪ್ರತಿಮೆಯೆದುರು ದೀರ್ಘದಂಡ ಪ್ರಣಾಮ ಮಾಡಿದನು. ಎದ್ದು ಒಳಅಂಗಳದ ಉಪವನಕ್ಕೆ ಸಾಗಿದನು. ಋತ್ವಿಜರು ಅಲ್ಲಿನ ಅಗ್ನಿಕುಂಡದಲ್ಲಿ ಹೋಮವನ್ನು ಮುಕ್ತಾಯಗೊಳಿಸಿ, ಅರಸನನ್ನು ನಿರೀಕ್ಷಿಸಿ ನಿಂತಿದ್ದರು. ಕೆಂಪು ಮುತ್ತು ರತ್ನ ವಜ್ರಗಳ ಹುಡಿಯನ್ನು, ಸುಗಂಧದ್ರವ್ಯಗಳನ್ನು ರಾಯ ಅಗ್ನಿಕುಂಡಕ್ಕೆ ಸಮರ್ಪಿಸಿ, ಪೂರ್ಣಾಹುತಿಯನ್ನು ನಿವೇದಿಸಿದನು.

ರಾಯ ಹೊರವಂದು ವೇದಿಕೆಯಮೇಲೆ ನಿಂತಾಗ ದಳಪತಿಗಳು, ಪೌರಪ್ರಮುಖರು ಬಂದು ಪ್ರಣಮಿಸಿದರು; ಕೆಲವರು ಅಪೂರ್ವ ವಸ್ತುಗಳ ಕಾಣಿಕೆ ನೀಡಿದುದೂ ಉಂಟು. ಅತಿಥಿಗಳೆಲ್ಲ ನಿರ್ಗಮಿಸಲು ರಾಯನೂ ಅರಮನೆಯ ಒಳ ಸಾರಿದನು. ಇದುವರೆಗೂ ದೇಗುಲದ ಸಮ್ಮುಖದಲ್ಲಿ ನರ್ತನಗೈಯುತ್ತಿದ್ದ ದೇವದಾಸಿಯರು ಅರಸ ನಿರ್ಗಮಿಸಿದ ಬಹು ಕಾಲದವರೆಗೂ ನರ್ತಿಸುತ್ತ ತಮ್ಮ ನಾಟ್ಯಸೇವೆಯನ್ನು ವಿರೂಪಾಕ್ಷದೇವನಿಗೆ ಸಮರ್ಪಿಸಿದರು.

ಮಧ್ಯಾಹ್ನ ಮೂರುಗಂಟೆಗೆ ಅರಮನೆಗೆ ಮತ್ತೆ ಪೌರರ ಆಗಮನ. ಮಲ್ಲರಂಗದ ಸುತ್ತ ಎಲ್ಲ ಆಸೀನರಾಗುವರು. ಹಿರಿಯ ಅಧಿಕಾರಿಗಳಿಗೆ, ರಾಜಸಂಬಂಧಿಗಳಿಗೆ ಮಲ್ಲರಂಗಕ್ಕೆ ತುಸು ದೂರದಲ್ಲಿ ಎತ್ತರದ ಕಟ್ಟಣೆಗಳಲ್ಲಿ ಆಸನಗಳು. ಮಲ್ಲರು, ನರ್ತಕಿಯರು, ಅಲಂಕೃತ ಆನೆಗಳು ಅರಮನೆಯ ಆವರಣಕ್ಕೆ ಬರುವುವು. ಅರಮನೆಯ ಅಧಿಕಾರಿಗಳು ಜನಜಂಗುಳಿಯ ಗದ್ದಲ ಗೊಂದಲಗಳನ್ನಡಗಿಸುತ್ತ ಅತ್ತಿಂದಿತ್ತ ಓಡಾಡುತ್ತಿರುವರು.

ಅರಸ ಆಗಮಿಸಿ ವೇದಿಕೆಯ ಮೇಲಿನ ಅಲಂಕೃತ ಆಸನದಲ್ಲಿ ಮುಂಡಿಸುವ; ಸುತ್ತಲಿರುವವರೆಲ್ಲ ತೋಳ್ಗಳನ್ನು

ಮೇಲೆತ್ತಿ ಪ್ರಣಮಿಸುವರು. ಅರಸ ಜರತಾರಿಯ ಗುಲಾಬಿಹೂಗಳುಳ್ಳ ಬಿಳಿ ರೇಸಿಮೆಯ ಉಡುಪು ತೊಟ್ಟಿದಾನೆ; ಕೊರಳಿಗೆ ವಜ್ರಹಾರ. ತಾಂಬೂಲಕರಂಡಕ, ಪಟ್ಟದ ಕತ್ತಿ ಮುಂತಾದ ರಾಜಚಿಹ್ನೆಗಳನ್ನು ಕೈಲಿ ಹಿಡಿದ ಅಲಂಕೃತ ಸೇವಕಗಣ ಅರಸನ ಸುತ್ತ ನಿಂತಿದೆ. ಬಳಿ ನಿಂದ ಬ್ರಾಹ್ಮಣರು ಹೊನ್ನ ಮೆರುಗಿನ ಹಿಡಿಯ, ಬಣ್ಣದ ಚಾಮರಗಳನ್ನು ದೇವವಿಗ್ರಹಕ್ಕೂ ರಾಜನಿಗೂ ಬೀಸುತ್ತಿದಾರೆ. ಈಟಿ ಗುರಾಣಿಗಳನ್ನು ಧರಿಸಿದ ದಳಪತಿಗಳು, ಬಿಲ್ಗಾರರ ದಳಪತಿಗಳು ಐತಂದು ಮಲ್ಲರಂಗದ ಸುತ್ತ ನಿಲ್ಲುವರು. ಇವರೇ ರಾಜರಕ್ಷಣಾದಳ. ಇವರ ಸಾಲಿನೀಚೆ ಅರಸನ ಸಮೀಪಕ್ಕೆ ಯಾರೂ ಶಸ್ತ್ರಸಹಿತ ಬರಲಾಗದು.

ನರ್ತಕಿಯರು ನೃತ್ಯದಲ್ಲಿ ತೊಡಗುವರು. ಕೆಂಪು ಮುತ್ತು ವಜ್ರಗಳ ಕುಂದಣವಿಟ್ಟ ಹೊನ್ನಕಂಠಿ, ತೋಳ ಭಾಪುರಿ, ಒಡ್ಯಾಣ, ಕಾಲಂದುಗೆಗಳಿಂದ ವಿಭೂಷಿತರಾದ ಈ ನೃತ್ಯಾಂಗನೆಯರ ನರ್ತನದಿಂದ ಜನ ಮೈಮರೆಯುವರು.

ಇತ್ತ ಮಲ್ಲರಂಗದಲ್ಲಿ ಮಲ್ಲಯುದ್ಧ ಮೊದಲಾಗುವುದು. ಮೊದಮೊದಲು ಸಾದಾಸಾದಾ ಮಲ್ಲರ ಕಾಳಗ; ಇವೂ ಕೋಲಾಹಲಕಾರಿಯೇನೋ ಹೌದು. ಮೊದಲ ಜೊತೆ ಸಮಸಮವೆಂದು ಪರೀಕ್ಷಕರ ತೀರ್ಮಾನ. ಎರಡನೆ ಜೋಡಿಯಲ್ಲಿ ದಪ್ಪ ಮೈಯ ಕರಿಯ ಕೊಣಪನಿಗೆ ಎದುರು ಲಘುದೇಹಿಯಾದ, ಜಿಂಕೆಯಂತೆ ಜಿಗಿಯುತ್ತಿದ್ದ ಬಿಳಿ ಮೈಯವನೊಡನೆ ಕಾಳಗ. ಬಿಳಿ ಮೈಯವ ಒಂದೇ ಏಟಿಗೆ ಅಪ್ಪಚ್ಚಿಯಾಗಿಬಿಡುವನೆಂದು ಜನ ನಿರೀಕ್ಷಿಸಿ ವಿಹ್ವಲರಾದರು. ಇಲ್ಲ, ಸಮಸಮನಾದ ಕಾಳಗ ಕೊಂಚಕಾಲ ನಡೆಯಿತು. ಆನೆಯೆದುರು ಸಮಸಮನಾಗಿ ಕಾಳಗ ಮಾಡಿದ ಜಿಂಕೆಯ ಚಮತ್ಕಾರಕ್ಕಾಗಿ ಜನ 'ಭಲೆ, ಭಲೆ' ಉದ್ಗಾರ ತೆಗೆದರು. ಹಾಯ್, ಏನು ? ಜಿಂಕೆ ಆನೆಯಡಿಸಿಲುಕಿ ಅಪ್ಪಚ್ಚಿ ಯಾಯಿತೆ ? ಇಲ್ಲ, ಜಿಂಕೆ ಆನೆಯ ಭಾರದಿಂದ ಮುಕ್ತವಾಯ್ತು. ಓ! ಆನೆ ಗಾಳಿಯಲ್ಲಿ ತೂರಾಡಿತು; ಜಿಂಕೆ ಎರಡೂ ಕೈಗಳನ್ನು ಆನೆಯ ಸೊಂಟಕ್ಕೆ ನೀಡಿ, ತಟಕ್ಕನೆ ಎತ್ತಿ, ಆನೆಯನ್ನು ಗಾಳಿಯಲ್ಲಿ ತೂರಾಡಿಸಿತು. ಆನೆ

ಗಾಳಿಯಲ್ಲಿ ಕಾಲುಗಳನ್ನು ವ್ಯರ್ಥವಾಗಿ ಒದೆಯಿತು. ಧೊಪ್! ಜಿಂಕೆ ಆನೆಯನ್ನು ನೆಲಕ್ಕೆ ಕೆಡವಿತು. ಸದ್ಯ, ಆನೆಯ ಹೊಟ್ಟೆ ಒಡೆಯಲಿಲ್ಲ. ಏದುತ್ತಿದ್ದ ಆನೆಯನ್ನು ನಾಲ್ವರು ಹಿಂಬಾಲಕರು ಎತ್ತಿ, ರಂಗದ ಹೊರಗೆ ಒಯ್ದರು.

ಇನ್ನೂ ಹಲವು ಜೋಡಿ ಮಲ್ಲರು ಕಾಳಗವಾಡಿ ತಮ್ಮ ಚಳಕು ಶಕ್ತಿಗಳನ್ನು ಪ್ರದರ್ಶಿಸಿದರು. ಎದುರಾಳಿಯ ಏಟಗೆ ಹಲ್ಲು ಮುರಿದುಕೊಂಡರು ಕೆಲವು ಮಲ್ಲರು; ಕಣ್ಣಿಂಗಿಹೋಯ್ತು ಕೆಲವು ಮಲ್ಲರಿಗೆ; ಮೊಗವೆಲ್ಲ ಗಾಯ ವಡೆಯಿತು ಕೆಲವು ಮಲ್ಲರಿಗೆ. ಏಟು ಬಿದ್ದು, ನೋತು ನೆಲಕ್ಕೊರಗಿದ ಮಲ್ಲರನ್ನು ಅವರವರ ಹಿಂಬಾಲಕರು ಎತ್ತಿ ಹೊರಗೊಯ್ಯುತ್ತಿದ್ದರು. ಬೈಕಾರುವವರೆಗೆ ನರ್ತನ, ಮಲ್ಲಯುದ್ಧ ಪ್ರೇಕ್ಷಕರ ಮನರಂಜನೆಮಾಡಿದವು.

ನೇಸರು ಮುಳುಗಿ ಕತ್ತಲೆ ಮುಸುಕಿದ ಕೂಡಲೆ, ದೊಡ್ಡ ದೊಡ್ಡ ಪಂಜುಗಳನ್ನು ಹಚ್ಚಿ ಮಲ್ಲರಂಗದ ಸುತ್ತಲೂ ಇಟ್ಟಾಗ ಮತ್ತೆ ನೇಸರು ಮೂಡಿದಷ್ಟು ಬೆಳಕು ತುಂಬಿತು. ಅರಮನೆಯ ಪ್ರಾಕಾರದ ಮೇಲೆ, ರಾಜವೇದಿಕೆಯ ಮೇಲೆ ದೀಪಗಳನ್ನು ಹಚ್ಚಿಡಲಾಯ್ತು.



ಈಗ ವಿವಿಧ ವಿನೋದಗಳ ಪ್ರದರ್ಶನಾರಂಭ. ಹಲವು ಹಲವು ವಿಚಿತ್ರ ವಿನೋದಕಾರರು ಒಬ್ಬೊಬ್ಬರಾಗಿ ಹೊರಗಿನಿಂದ ಬಂದು ಜನದೆದುರು ಹಾದು, ಅರಸನ ಬಳಿ ಸಾಗಿ, ಮುನ್ನಡೆದು ಮರೆಯಾಗುವರು. ರಣರಂಗವನ್ನು ಕಾಣದ ನಾಗರಿಕರ ರಂಜನೆಗಾಗಿ ಶಸ್ತ್ರಸನ್ನದ್ಧ ಅಶ್ವಾರೋಹಿಗಳು ಕೈದುಗಳಿಂದ ಕಾಳಗದ ಸೋಗುಮಾಡುತ್ತ ಬರುವರು.

**ಅಳಾ ಕರ್ನಾಟಕದೇವಿ**

ಆನಂತರ ಬಲೆ ಬೀಸುತ್ತ ಕೆಲವರು ಬರುವರು; ಜನಜಂಗುಳಿಯ ಕಡೆ ಬಲೆ ಬೀಸಿ, ದಾರ ಎಳೆಯುವುದು. ಯಾರಾದರೂ ಬಲೆಗೆ ಸಿಲುಕಿದಾಗ ಸುತ್ತಲ ಜನ ಗೇಲಿಮಾಡಿ ನಗುವರು; ಬಲೆ ಬೀಸಿದವನಿಗೆ ಕಾಣಿಕೆ ಕೊಟ್ಟು ಬಲೆಯಿಂದ ಬಿಡುಗಡೆ ಹೊಂದಬೇಕು. ಈ ಎಲ್ಲ ವಿವಿಧ ವಿನೋದಾವಳಿ ಮುಗಿದಮೇಲೆ ಮತಾಪುಮದ್ದುಗಳ, ಬಾಣ ಬಿರುಸುಗಳ ಪ್ರೈಖರಿ. ವಿವಿಧ ರೀತಿಯ, ವಿವಿಧಾಕೃತಿಯ, ವಿವಿಧ ಪರಿಣಾಮದ ಮತಾಪು ಬಾಣಬಿರುಸುಗಳ ಬಣ್ಣದ ಹಬ್ಬದಿಂದ ಜನದ ಕಣ್ಣು ತಣಿಯುವುದು.

ಈಗ ಹಲವು ದಳಪತಿಗಳ ಚಿತ್ರವಿಚಿತ್ರವಾಗಿ ಅಲಂಕೃತವಾದ ವಾಹನಗಳ ಮೆರವಣಿಗೆ; ಕೆಲವು ವಾಹನಗಳಿಗೆ ಎರಡು ಮೂರು ಅಂತಸ್ತು. ಹೊನ್ನ ಕಳಸವುಳ್ಳ ಕೆಲವು ವಾಹನಗಳಿಗೆ ಹತ್ತು ಹನ್ನೆರಡು ಕುದುರೆ ಕಟ್ಟಿದೆ. ವಾಹನಗಳ ವಿಜೃಂಭಣೆಯಾದೊಡನೆ ತೇಜಿಗಳ ಥಕಥೈ. ಬಗೆಬಗೆ ಬಣ್ಣದ ಉಬ್ಬುಗುದುರೆಗಳು ವಿವಿಧ ವರ್ಣದ ವಸನಗಳಿಂದ ಆಚ್ಛಾದಿತವಾಗಿ, ಹಲವು ಹೂ ಗುಲಾಬಿಗಳಿಂದ ಅಲಂಕೃತವಾಗಿ, ಹೊನ್ನ ಮೆರುಗಿನ ಕಡಿವಾಣದಿಂದ ಶೋಭಿತ. ಇವೆಲ್ಲ ನೃತ್ಯದಲ್ಲಿ ತರಪೇತು ಹೊಂದಿ ಥಕಥೈ ನಡಿಗೆಯಿಂದ ಮುಂಬರುತ್ತವೆ. ಇವೆಲ್ಲವುಗಳ ಮುಂದೆ ಪಟ್ಟಗುದುರೆ; ಎರಡು ರಾಜಛತ್ರಗಳಿಂದ ಶೋಭಾಯಮಾನ; ಹಿಂಬಾಲಿಸುವ ಅಶ್ವಗಳಿಗಿಂತ ಉತ್ತಮತರ ವಸ್ತ್ರಾಭರಣ ವಿಭೂಷಿತ. ಪಟ್ಟಗುದುರೆಯ ಕಡಿವಾಣ ಹಿಡಿದು ಅಶ್ವಪಾಲಕ ಮುನ್ನಡೆಸುತ್ತಿದಾನೆ. ಅಶ್ವಸಮೂಹ ಮಲ್ಲರಂಗವನ್ನು ಎರಡುಬಾರಿ ಪರಿಭ್ರಮಿಸಿ, ರಂಗದ ನಡುವೆ ಕಾಲಿಡುವುವು. ಅರಸನಿಗೆ ಅಭಿಮುಖವಾಗಿ ಐದು ಸಾಲುಗಳಲ್ಲಿ ನಿಲ್ಲುವುವು; ಪಟ್ಟ ಗುದುರೆ ಎಲ್ಲಕ್ಕೂ ಮುಂದೆ.

ಮೃದಂಗ ಖಂಜರಿ ತಂಬೂರಿ ಮುಂತಾದ ವಾದ್ಯಗಳನ್ನು ಮೃದು ಮಧುರವಾಗಿ ಬಾಜಿಸುತ್ತಿರುವ ವಾದ್ಯಕಾರ್ತಿಯರ ಮೇಳ ಬರುವುದು; ಮೇಳದ ಹಿಂದೆ ನವಯೌವನದ ರೂಪವತಿ ಕನ್ನಿಕೆಯರು. ಈ ಕನ್ನಿಕೆಯರೆಲ್ಲ ಬೆಲೆಬಾಳುವ

ರೇಸಿಮೆಯ ಸೀರೆಗಳನ್ನು ಉಟ್ಟಿರುವರು; ಜಡೆಯ ಗಂಟಿಗೆ ತೋರಮುತ್ತುಗಳಿಂದ ನೆಯ್ದ ಹೂಗಳನ್ನು ಸಿಕ್ಕಿಸಿದೆ; ಪಚ್ಚೆ ಕೆಂಪು ಮುತ್ತು ವಜ್ರಗಳ ಕುಸುರಿಕೆಲಸಮಾಡಿದ ಹೊನ್ನಪಂಠಿ ಕಂಠವನ್ನಲಂಕರಿಸಿದೆ; ಮುತ್ತಿನ ತೋಳ ಭಾಪುರಿ; ವಜ್ರದ ಕಂಕಣ ಮುಂಗೈಗೆ; ರತ್ನಖಚಿತ ಹೊನ್ನ ಒಡ್ಯಾಣ ನಡುವಿಗೆ; ಒಡ್ಯಾಣಕ್ಕೆ ನೇತಿದ್ದ ನಡು ದೊಡೆಯವರೆಗಿರುವ ಮುತ್ತಿನ ಝುಲ್ಲಿ; ತೋರಮುತ್ತುಗಳ ಸರದ ರುಳಿ ಕಾಲ್ಗೆ. ಪ್ರತಿ ಕನ್ನಿಕೆಯ ಕೈಲೂ ಸುವರ್ಣ ಕಲಶ. ಕಲಶದಲ್ಲಿ ತುಪ್ಪದ ನಂದಾದೀಪ ಉರಿಯುತ್ತಿದೆ. ಇದೇ ತೆರ ಅರವತ್ತು ಕನ್ನಿಕೆಯರು ಒಬ್ಬರ ಹಿಂದೆ ಒಬ್ಬರು ಬರುತ್ತಾರೆ. ಮೈಮೇಲಿನ ಒಡವೆಗಳ ಭಾರವೋ ಬಡ ನಡುವಿನವರು ಕುಸಿಯುವಷ್ಟು; ಹಲವು ಕೋಮಲೆಯರು ಎರಡು ಕಡೆಯೂ ಇಬ್ಬರು ಸ್ತ್ರೀಯರ ನೆರವು ಪಡೆದು ನಡೆಯುತ್ತಾರೆ. ಈ ಕನ್ನಿಕೆಯರೆಲ್ಲ ರಾಣಿಯರ ಸಖಿಯರು. ಕನ್ನಿಕೆಯರು ರಂಗಮಧ್ಯದಲ್ಲಿರುವ ಅಶ್ವಗಳನ್ನು ಮೂರುಬಾರಿ ಪ್ರದಕ್ಷಿಣೆ ಮಾಡಿ, ಅರಮನೆಯೊಳಕ್ಕೆ ನಿರ್ಗಮಿಸುವರು.

ಕುಮರೆಗಳೂ ಮಲ್ಲರಂಗದಿಂದ ನರ್ತಿಸುತ್ತ ನಿರ್ಗಮಿಸುವುವು. ಅಲಂಕೃತವಾದ ಆನೆಗಳು ರಂಗಕ್ಕೆ ಬರುವುವು; ರಾಯನಿಗೆ ಪ್ರಣಮಿಸಿ ನಿರ್ಗಮಿಸುವುವು. ಅರಸನೂ, ದೇವಮೂರ್ತಿಸಹಿತ ಬ್ರಾಹ್ಮಣರೂ ನಿರ್ಗಮಿಸುವರು. ಅರಸ ದೇವಮಂದಿರದಲ್ಲಿ ಮತ್ತೆ ಪೂಜೆ ಸಲಿಸುವನು. ಮಹಾನವಮಿಯ ಒಂಬತ್ತು ದಿನಗಳೂ ಇದೇರೀತಿ ಕಳೆಯುವುವು.

ಒಂಬತ್ತನೆಯ ದಿನ ಅರಸನಿಂದ ಸೈನ್ಯಪರಿಶೀಲನೆ. ವಿಜಯನಗರದಿಂದ ಹರಿದಾರಿ ದೂರದಲ್ಲಿ ವಿಶಾಲ ಕ್ಷೇತ್ರದ ನಡುವೆ ಮಕ್ಕಾಮಖಮಲ್‌ನ ಡೇರೆ; ಒಳಗೆ ವಿರೂಪಾಕ್ಷ ವಿಗ್ರಹ. ಅರಮನೆಯಿಂದ ಡೇರೆಯವರೆಗೆ ವಿಜಯನಗರದ ದಳಪತಿಗಳು ಸ್ವಸೈನ್ಯಸಮೇತರಾಗಿ ನಿಂತಿದಾರೆ. ಹಾದಿಯ ಇಕ್ಕೆಲದಲ್ಲೂ ಮೊದಲ ಸಾಲುಗಳು ಪದಾತಿಸೈನ್ಯ; ಅದರ ಹಿಂದೆ ಅಶ್ವಗಳು; ಅಶ್ವಪಂಜ್ತಿಯ ಹಿಂದೆ ಹಸ್ತಿಪಂಜ್ತಿ.

ಪದಾತಿ ಸೈನ್ಯ ಹತ್ತು ಲಕ್ಷಕ್ಕೆ ಮೀರಿದುದು. ಹಾದಿಯಲ್ಲಿ ಕಾಣುವ ಬಯಲಿನಲ್ಲಿ, ಕಣಿವೆಗಳಲ್ಲಿ, ಗುಡ್ಡಗಳಲ್ಲಿ

ಪದಾತಿ ಸೈನ್ಯ ನಿಂತು ಅಲ್ಲೆಲ್ಲ ನೆಲ ಮುಚ್ಚಿಹೋಗಿ, ಜನ ಮಾತ್ರ ಕಾಣುವುದು. ದಂಡಾಳುಗಳಿಗೆಲ್ಲ ಬಹು ಬೆಲೆ ಬಾಳುವ, ಅಮಿತ ವರ್ಣಗಳ ಉಡುಪುಗಳು; ಇಂಥ ಉಡುಪುಗಳು ಜಗತ್ತಿನ ಯಾವಯಾವ ಮೂಲೆಯಿಂದ ಬಂದುವೋ! ಗುರಾಣಿಕಾರರು, ಬಿಲ್‌ಗಾರರು, ತುಪಾಕಿಸಿಪಾಯಿಗಳು ವಿಧವಿಧವಾದ ಹೊಳೆವ ಕೈದುಗಳನ್ನು ಹೊತ್ತಿರುವರು.

ರಾವುತರು ಅಲಂಕೃತವಾದ, ಸನ್ನದ್ಧವಾದ ಅಶ್ವಗಳನ್ನು ಏರಿದ್ದರು. ರಾವುತರ ಅಂಗರಕ್ಷಣೆಗೆ ಹಲವು ಪದರಗಳ ಚರ್ಮದ ಕವಚ; ಮೇಲ್ಮೈಗೆ ಕಬ್ಬಿಣದ ಫಲಕಗಳು, ಕೆಲವರಿಗೆ ರಜತ ಫಲಕಗಳು. ಶಿರಸ್ತ್ರಾಣ ಕುತ್ತಿಗೆಗೂ ರಕ್ಷಣೆ ಕೊಡುವಂಥದು, ಮುಖ ಮುಚ್ಚಿಕೊಳ್ಳಲೂ ಮುಂದುಗಡೆ ಅನುಗೊಳಿಸಿದೆ. ಕಟಿಯಲ್ಲಿ ಕತ್ತಿ, ಗಂಡುಗೊಡಲಿ ನೇತಿವೆ. ಕೈಗಳಲ್ಲಿ ಭಲ್ಲೆಯ; ಚಿತ್ರ ಕೆಲಸವುಳ್ಳ ಮಖಮಲ್ ಛತ್ರಿ ಪ್ರತಿ ಅಶ್ವಾರೋಹಿಗೂ.

ಆನೆಗಳಿಗೂ ಮಖಮಲ್‌ನ, ಜರತಾರಿಯ ಹೊದಿಕೆ. ಆನೆಗಳ ತಲೆಯಮೇಲೆ ರಾಕ್ಷಸರ, ಪಿಶಾಚಿಗಳ ಚಿತ್ರಗಳು ಬರೆಯಲ್ಪಟ್ಟಿವೆ. ಆನೆಗಳಿಗೆ ಕಟ್ಟಿದ ಗಂಟೆಗಳು ಅಲ್ಲಾಡುತ್ತಿರಲು ಭೂಮಿಯೇ ನಡುಗುತ್ತಿರುವಂತೆ ಭಾಸವಾಗುವುದು. ಪ್ರತಿ ಆನೆಯಮೇಲೂ ಮುವ್ವರು ನಾಲ್ವರು ಯೋಧರು; ಹತ್ತಿ ತುಂಬಿದ ಕವಚ ಧರಿಸಿ, ಭಲ್ಲೆಯ ಗುರಾಣಿಗಳನ್ನು ಹಿಡಿದು, ದಾಳಿಗೆ ಹೊರಟಂತೆ ಕಾಣುತ್ತಾರೆ.

ಅರಸ ಶ್ವೇತವಸನಧಾರಿಯಾಗಿ, ಅಶ್ವಾರೋಹಿಯಾಗಿ ಅರಮನೆಯಿಂದ ಹೊರಡುವನು; ವಿಶೇಷ ಸಮಾರಂಭಗಳಿಗಾಗಿ ಮುಡಿಪಾದ ಅಪೂರ್ವ ಆಭರಣಗಳನ್ನು ಅರಸ ಧರಿಸಿದಾನೆ. ಮೇಲೆ ಎರಡು ರಾಜಛತ್ರಗಳು. ಅರಸನಿಗೆ ಬಹು ಮುಂದೆ ಸರ್ವಾಲಂಕೃತ ಹಸ್ತಿಗಣ; ಆನೆಗಳ ಬೆಂಬದಿಯ ಸುಂದರ ಅಶ್ವಸಮೂಹ ಜರಿ, ರತ್ನಾಭರಣಗಳಿಂದ ಅಲಂಕೃತವಾಗಿದ್ದು ಮೆರವಣಿಗೆಯ ವಿಜೃಂಭಣೆಯನ್ನು ವರ್ಧಿಸಿತ್ತು. ಕುದುರೆಗಳ ಹಿಂದೆ ಬೆಳ್ಳಿಯ ಪಲ್ಲಕ್ಕಿ; ಪಲ್ಲಕ್ಕಿ

ಯಲ್ಲಿ ವಿರೂಪಾಕ್ಷ ಪ್ರತಿಮೆ; ಪಲ್ಲಕ್ಕಿಯನ್ನು ಹದಿನಾರು ಭಟರು ಹೊತ್ತೊಯ್ಯುತ್ತಿದ್ದಾರೆ; ಈ ಭಟರ ಹೆಗಲು ಸೋತಾಗ ಹೊರಲು ಕೆಲವಲ್ಲಿ ಇನ್ನೂ ಕೆಲವರು. ಅರಸನ ಹಿಂದೆ ಅಮೂಲ್ಯ ವಸ್ತ್ರಭೂಷಣಗಳಿಂದ ಝಗಝಗಿಸುತ್ತಿರುವ ಸಾಮಂತರು, ಪ್ರಾಂತಾಧಿಕಾರಿಗಳು, ಉನ್ನತಾಧಿಕಾರಿಗಳು.

ಅರಸನ ಸವಾರಿ ಮುಂಸಾಗುತ್ತಿರಲು ಕೆಲಗಳಲ್ಲಿ ಸಾಲ್ಪಿಡಿದ ದಂಡಾಳುಗಳು ಆನಂದೋದ್ಗಾರ ಮಾಡುತ್ತ, ಜಯಘೋಷ ಹಾಕುತ್ತ, ಗುರಾಣಿಗಳನ್ನು ಬಡಿದು ಸದ್ದು ಮಾಡಿದರು. ಕುದುರೆಗಳು ಕೆನೆದವು; ಆನೆಗಳು ಘೀಳಿಟ್ಟವು; ಫಿರಂಗಿಗಳು ಹಾರಲು ಗಿರಿಕಂದರಗಳು ಕಂಪಿಸಿದವು. ಅರಸ ಡೇರೆಯನ್ನು ತಲುಪುವವರೆಗೂ ಇದೇ ಘೋಷ. ಅರಸ ಮುಂದೆ ಸಾಗಿದರೂ ದಂಡಾಳುಗಳು ಚಲ್ಲಾಪಿಲ್ಲಿಯಾಗದೆ ಶಿಸ್ತಿನಿಂದ ನಿಶ್ಚಲರಾಗಿ ನಿಂತಿದ್ದರು. ಅರಸ ಡೇರೆಯನ್ನು ಪ್ರವೇಶಿಸಿ, ಪೂಜಾವಿಧಿಗಳನ್ನು ನೆರವೇರಿಸಿದನು. ಪೂಜಾನಂತರ ಪುನಃ ಅಶ್ವಾರೋಹಿಯಾಗಿ, ಮೊದಲಿನಂತೆ ಪರಿವಾರಸಮೇತನಾಗಿ ಅರಮನೆಗೆ ನಿರ್ಗಮಿಸಿದನು. ಈಗಲೂ ದಂಡಾಳುಗಳದು ಮೊದಲ ರೀತಿಯಲ್ಲೇ ಆನಂದ ಜಯಘೋಷ. ಅರಸ ಮುಂದುವರಿದ ಕೂಡಲೇ ಹಿಂದಿನಿಂದ ದಂಡಾಳುಗಳೂ ಸಾಗಿಬರುವರು. ಗಿರಿಕಂದರ ಗಳಲ್ಲಿ ಸಾಲ್ಪಿಡಿದು ನಿಂತಿದ್ದ ಲಕ್ಷಗಟ್ಟಲೆ ಯೋಧರು ಉದ್ಘೋಷಿಸುತ್ತ, ಗುರಾಣಿಗಳನ್ನು ಬಡಿಯುತ್ತ, ಬಿಲ್‌ಗಳ ನಾಣುಮಿಡಿಯುತ್ತ, ವಿಜಯನಗರ ಕಂಪಿಸುವಂಥ ಶಬ್ದವೆಸಗುತ್ತ ಇಳಿಯತೊಡಗಿದರು. ಇಳಿದು ಬಯಲಿನಲ್ಲಿದ್ದ ತಮ್ಮ ತಮ್ಮ ಡೇರೆ ಬಿಡಾರಗಳಿಗೆ ನಿರ್ಗಮಿಸಿದರು. ಇಂಥ ಅಗಾಧ ಜನಸಂದಣಿ ವಾಸ್ತವಿಕವಲ್ಲ, ಸ್ವಪ್ನಲೋಕಕ್ಕೆ ಸೇರಿದುದು, ಎನಿಸುವಂತಿತ್ತು.

* * * *

ರಾಯ ಕವಿ, ಕಲಾವಿದರಿಗೆ ಆಶ್ರಯಭೂತನಲ್ಲದೆ ಸ್ವತಃ ಕವಿ, ಗಾಯಕ; ವೇಣುವಾದನ ನಿಪುಣ; ಮದಾಲಸ

ಚಾರಿತ್ರ, ರಸಮಂಜರಿ ಮುಂತಾದ ಸಂಸ್ಕೃತ ಉದ್ಗ್ರಂಥಗಳನ್ನು ರಚಿಸಿದವನು. ತಾನು ಅಚ್ಚಗನ್ನಡಿಗನಾಗಿ, ಕರ್ಣಾಟಕ ಸಾರ್ವಭೌಮನಾದರೂ ತನಗೆ ಕನ್ನಡಿಗರೂ, ತೆಲುಗರೂ ಕನ್ನಡವೂ, ತೆಲುಗೂ ಒಂದೇ ಎಂಬುದನ್ನು ಪ್ರದರ್ಶಿಸಲೆಂಬಂತೆ 'ಆಮುಕ್ತ ಮಾಲ್ಯದ' ಎಂಬ ತೆಲುಗು ಕಾವ್ಯವನ್ನು ರಚಿಸಿದ. ರಾಯನೇ ರಚಿಸಿದ 'ಜಾಂಬವತಿ ಕಲ್ಯಾಣ' ಎಂಬ ಸಂಸ್ಕೃತ ನಾಟಕ ವಸಂತೋತ್ಸವದ ವೇಳೆ ಪ್ರದರ್ಶಿತವಾಗುತ್ತಿತ್ತು. ಕೃಷ್ಣದೇವರಾಯ ಭೋಜ ರಾಜನಂತೆ ಪ್ರತಿ ವರ್ಷದ ವಸಂತೋತ್ಸವದ ವೇಳೆ ಸಾಮ್ರಾಜ್ಯದ ಎಲ್ಲ ಪ್ರಮುಖ ಕವಿ, ವಿದ್ವಾಂಸರನ್ನು ರಾಜಧಾನಿಗೆ ಕರೆಸಿ, ಗೋಷ್ಠಿ ನಡೆಸುತ್ತಿದ್ದನು. ಆಹ್ವಾನಿತರ ಕವಿತಾಸಾಮರ್ಥ್ಯವನ್ನು ಪರೀಕ್ಷೆಮಾಡಿ ಅವರವರ ಯೋಗ್ಯತಾನು ಸಾರ ಬಹುಮಾನವೀಯುತ್ತಿದ್ದನು. ಕನ್ನಡಿಗ ಅರಸಾದ ರಾಯ ತಿಮ್ಮಣ್ಣ, ಕುಮಾರ ವಾಲ್ಮೀಕಿ ಮುಂತಾದ ಕನ್ನಡ ಕವಿವರ್ಯರಿಗೆ ಮಾತ್ರವಲ್ಲದೆ, ಅಲ್ಲಸಾನಿ ಪೆದ್ದನ್ನ, ನಂದಿತಿಮ್ಮ ಮುಂತಾದ ತೆಲುಗು ಕವಿಗಳಿಗೂ, ಕುಮಾರ ಸರಸ್ವತಿ ಮುಂತಾದ ತಮಿಳು ಕವಿಗಳಿಗೂ ಆಶ್ರಯದಾತ. ಉತ್ಕಲದ ಗಜಪತಿರಾಜನ ಆಸ್ಥಾನಕವಿಗಳಾಗಿದ್ದ ಲೊಲ್ಲ ಲಕ್ಷ್ಮೀಧರ, ದಿವಾಕರರೂ ತಮ್ಮರಸ ಪರಿಭವಿಸಲು ವಿಜಯನಗರಕ್ಕೆ ಐತಂದು ರಾಯನ ಆಸ್ಥಾನಕವಿಗಳಾದರು. ಈ ನಾಲ್ಕು ಭಾಷೆಗಳಿಗೂ ಸೇರಿದ ಕವಿಶ್ರೇಷ್ಠರು ಅಷ್ಟದಿಗ್ಗಜಗಳೆನಿಸಿ ಆಸ್ಥಾನಕವಿಗಳಾಗಿದ್ದರು. ವ್ಯಾಸರಾಯ, ಪುರಂದರದಾಸ, ಕನಕದಾಸ ಇವರು ರಾಯನಿಂದ ಪ್ರೋತ್ಸಾಹಗೊಂಡು, ಭಕ್ತಿಗೀತಗಳನ್ನು ರಚಿಸಿ ನಾಡಿನಲ್ಲೆಲ್ಲೂ ಪ್ರಚುರಪಡಿಸಿ ದಾಸಕೂಟ ಸಂಪ್ರದಾಯವನ್ನು ಅಭ್ಯುದಯಗೊಳಿಸಿದರು.

ಮಹಾನವಮಿ ಕಳೆದ ಮರುಬೆಳಿಗ್ಗೆ ಭುವನವಿಜಯದಲ್ಲಿ ಸಭೆ ಸೇರಿದೆ. ಮಂತ್ರಿ ಸೇನಾನಿ ಸಾಮಂತ ಪ್ರಾಂತಾಧಿಕಾರಿಗಳು ಎಂದಿನಂತಲ್ಲ; ಇಂದಿನ ಸಭೆಗೆ ವಿದ್ವಾಂಸರೇ ಮಂತ್ರಿವರ್ಯರು; ಕವಿಶ್ರೇಷ್ಠರೇ ಸೇನಾನಿಗಳು; ತರ್ಕ ಪಾರಂಗತರೇ ಸಾಮಂತ ಪ್ರಾಂತಾಧಿಕಾರಿಗಳು. ಕವಿ, ವಿದ್ವಾಂಸರು ಉಚಿತಾಸನಗಳಲ್ಲಿ ಆಸೀನರಾಗಿದ್ದಾರೆ.

**ಮಹಾನವಮಿ** **ಸೂರಣಪ್ಪತ್ತೇಳು**

ಭಟ್ಟಂಗಿಗಳ ಹೊಗಳುದನಿ ಆರಂಭವಾಯ್ತು; ಕವಿ, ಪಂಡಿತರೆಲ್ಲ ಅರಸನ ಆಗಮನವನ್ನು ನಿರೀಕ್ಷಿಸಿ ಎದ್ದು ನಿಂತರು. ಭಟ್ಟಂಗಿಗಳ ಧ್ವನಿ ಇದ್ದಕ್ಕಿದ್ದಂತೆ ಸ್ತಬ್ಧ. ನೆರೆದವರು ಚಕಿತರಾದರು; ಎಂದೂ ಇಲ್ಲದ ಪರಿ ಇಂದೇಕೆ! ಸಹಸ್ರಾಂತರ ವರ್ಷ ಜನತೆಯ ಹೃದಯದಲ್ಲಿ ಚಿರಸ್ಥಾಯಿಯಾಗಿ ಅಮರರಾಗುವ ಕವಿಗಳೆದುರು ತನ್ನ ಹೊಗಳಿಕೆಯನ್ನು ಕೂಗಿಸಲು ಅರಸನಿಗೆ ಸಂಕೋಚ; ಭಟ್ಟಂಗಿಗಳು ಸ್ತಬ್ಧರಾಗಲು ನಿರ್ದೇಶನವಿತ್ತಿದ್ದನು. ತನ್ನ ಹೆಸರೂ ಇತಿಹಾಸದಲ್ಲಿ ಅಮರವಾಗಿರುವುದೆಂಬುದು ಸವ್ಯಮೂರ್ತಿ ರಾಯನಿಗೆ ತಿಳಿದಿದ್ದರೂ ತಿಳಿದಂತಿರಲಿಲ್ಲ. ರಾಯ ಸಭಾಮಂದಿರದ ಒಳಬಂದು ಮಯೂರಾಸನದಲ್ಲಿ ಆಸೀನನಾದನು.

ತಿಮ್ಮಣ್ಣಕವಿ ಅರಸನ ಸಮ್ಮುಖದಲ್ಲಿ ನಿಂತು ಸ್ವಸ್ತಿವಾಚನ ಮಾಡಿದನು.

'ತಿಮ್ಮಣ್ಣ ಕವಿ! ನಾರಣಪ್ಪ ಅರೆಬರೆದಿಟ್ಟ ಭಾರತವನ್ನು ಪೂರ್ತಿಗೊಳಿಸಲು ನಾನು ಇತ್ತ ಸೂಚನೆ ಎಲ್ಲಿಯವರೆಗೆ ಕಾರ್ಯಗತವಾಗಿದೆ?'

'ಪ್ರಭು. ನಾರಣಪ್ಪನವರ ಭಾರತವನ್ನು ಪೂರ್ಣಗೊಳಿಸಲು ತಮ್ಮ ಆದೇಶದಂತೆ ಶಾಂತಿಪರ್ವದಿಂದ ರಚನೆಯನ್ನು ಆರಂಭಿಸಿದೇನೆ. ಸರಸ್ವತಿ ನನ್ನ ನಾಲಿಗೆಯ ಮೇಲೆ ಬಿತ್ತರಿಸಿದಂತೆಲ್ಲ ಅಕ್ಷರಗಳನ್ನು ಓಲೆಗರಿಗೆ ಇಳಿಸುತ್ತಿದೇನೆ. ನನ್ನ ಕೃತಿಯನ್ನು ಪ್ರಭುಗಳಿಗೇ ಸಮರ್ಪಣೆ ಮಾಡಿದೇನೆ. ಪರಾಂಬರಿಸೋಣವಾಗಲಿ.'

ತಿಮ್ಮಣ್ಣಕವಿ ಹಿಂದೆ ಹೆಜ್ಜೆ ಹಾಕಿ, ವ್ಯಾಸಪೀಠದಲ್ಲಿ ತಾಳೆಗರಿಯ ಕಡತವನ್ನು ಬಿಚ್ಚಿಟ್ಟು, ಶಾಂತಿಪರ್ವದ ಕೆಲವು ಭಾಗವನ್ನು ರಾಗವಾಗಿ ಪಠಿಸಿದನು. ರಾಯ ತಲೆದೂಗಿದನು.

ತಿಮ್ಮಣ್ಣಕವಿಯ ಭಾರತವಾಚನ ಮುಗಿವುಗೊಳ್ಳಲು ರಾಯ ಎಂದನು 'ಪುರಂದರದಾಸರು ಕಾಣಬರುವುದಿಲ್ಲವಲ್ಲ. ಅವರಿಗೆ ಆಹ್ವಾನದ ಮೇಲೆ ಆಹ್ವಾನವನ್ನು ಕಳುಹಿದ್ದೆ, ಇಂದಿನ ಕವಿಗೋಷ್ಠಿಗೆ ತಪ್ಪದೆ ದಯಮಾಡಿಸಬೇಕೆಂದು'

‘ ಪುರಂದರದಾಸರ ಕವಿತಾರಚನೆಗೆ ಕಲೋಪಾಸನೆ ಉದ್ದೇಶವಲ್ಲ, ದೇವಾರಾಧನೆ. ಅವರು ಭಕ್ತಿಯ ಆವೇಶದಲ್ಲಿ ಮನಬಂದಂತೆ ಹಾಡಿಮದೆ ಉತ್ಕೃಷ್ಟಗೀತೆ, ಸಂಗೀತವಾಗಿ ಹೊರಹೊಮುತ್ತಿದೆ. ಯಾರ ಅಂಕೆಯೂ ಇಲ್ಲದೆ ದಾಸರು ಭಕ್ತಿತನ್ಮಯರಾಗಿ ಕರ್ಣಾಟಕದಲ್ಲೆಲ್ಲ ಸಂಚರಿಸುತ್ತಿದಾರೆ. ದೇವನಾಮ ಸ್ಮರಣೆಯೊಂದಲ್ಲದೆ ಇನ್ನಾರ ಹಂಗೂ ಅವರಿಗಿಲ್ಲ; ಇನ್ನು ಅರಸರೋಲಗಕ್ಕೆ ಬರುವುದುಂಟೆ! ಬಂದರೂ ಆಕಸ್ಮಿಕ ’ ಎಂದ ತಿಮ್ಮಣ್ಣ ಕವಿ.

“ ನೀನ್ಯಾಕೋ ನಿನ್ನ ಹಂಗ್ಯಾಕೋ
ನಿನ್ನ ನಾಮವೊಂದಿದ್ದರೆ ಸಾಕೋ ”

ಸುಮಧುರವಾದ, ಭಕ್ತಿತನ್ಮಯವಾದ ದನಿಗೇಳಿ ಸಭಿಕರೆಲ್ಲ ಚಕಿತರಾದರು. ಕೆಂಪು ರೇಸಿಮೆಯ ಮಡಿಯುಟ್ಟು, ಮೈಯೆಲ್ಲ ಶಂಖಚಕ್ರಗಳಿಂದ ಚಿತ್ರಿತವಾಗಿ, ಕೈಯಲ್ಲಿ ತಂಬೂರಿ ಮೀಟುತ್ತ, ಧ್ಯಾನಾಸಕ್ತರಂತೆ ಕಣ್ಣನ್ನು ಅರೆಮುಚ್ಚಿ, ಬಾಯಲ್ಲಿ ಸುಮಧುರಸ್ವನವನ್ನು ಹೊಮ್ಮಿಸುತ್ತ ಪುರಂದರದಾಸರ ಮೂರ್ತಿ ಮೆಲ್ಲನೆ ಸಭಾಮಂದಿರದೊಳಗೆ ಪ್ರವೇಶಿಸಿತು. ರಾಯ ಧಿಗ್ಗನೆದ್ದು, ಪುರಂದರದಾಸರ ಸನಿಹ ಸಾಗಿ, ಕೈವಿಡಿದು ಕರೆತಂದು ಮಯೂರಾಸನದಲ್ಲಿ ಕುಳ್ಳಿರಿಸಿ, ತಾನು ಅವರ ಪದತಲದಲ್ಲಿ ಮಂಡಿಸಿದನು. ರಾಯನ ವಿನಮ್ರತೆಯನ್ನೂ, ದೈವಭಕ್ತಿಯನ್ನೂ ಕಂಡು ಕವಿಗಳನೇಕರ ಕಣ್ಣು ಆನಂದಬಾಷ್ಪದಿಂದ ತೇವಗೊಂಡಿತು.

ತಾವು ಸಾರ್ವಭೌಮನ ಮಯೂರಾಸನದಲ್ಲಿ ಮಂಡಿಸಿದೇವೆಯೋ, ಮುಳ್ಳು ಪೊದೆಯಮೇಲೆ ಕುಳಿತಿದೇವೆಯೋ ಎಂಬ ಪರಿವೆಯಿಲ್ಲದ ದಾಸರು ಕಣ್ಗಳನ್ನು ಅರೆಮುಚ್ಚಿ ಹಾಡುತ್ತಲೇ ಇದ್ದರು; ಅರಸನ ಸಮ್ಮುಖದಲ್ಲಿ, ಆಸ್ಥಾನ ಕವಿಗಳ ನಡುವೆ, ರಾಜಸಭಾಭವನದಲ್ಲಿ ಇರುವೆನೆಂಬ ಪರಿವೆಯೇ ಇಲ್ಲ ಅವರಿಗೆ. ಹಾಡುತ್ತಲೇ ಇದ್ದರು; ರಾಯ,

ಸಭಿಕರು ತನ್ಮಯರಾಗಿ ಕೇಳುತ್ತಲೇ ಇದ್ದರು. ಇದ್ದಕ್ಕಿದ್ದಂತೆ ದನಿ ನಿಂತಂತೆ ಭಾಸವಾಯ್ತು; ಸಭಿಕರು ಕಣ್ಣುಜ್ಜಿಕೊಂಡು ನೋಡಿದರು. ಹೌದು, ದಾಸರ ಆಕೃತಿ ಈಗ ಮಯೂರಾಸನದಲ್ಲಿಲ್ಲ. ಎಲ್ಲರೂ ಮೈಮರೆತು ಗಾನಶ್ರವಣ ಮಾಡುತ್ತಿದ್ದ ಕಾಲದಲ್ಲಿ ದಾಸರು ಬಂದಂತೆ ಹೊರಟುಹೋಗಿದ್ದರು. ಅವರ ನಡವಳಿಕೆಯನ್ನು ಚೆನ್ನಾಗಿ ಬಲ್ಲ ರಾಯ ಅವರನ್ನು ಮತ್ತೆ ಕರೆಯಿಸಲು ದೂತರನ್ನಟ್ಟುವ ಗೊಂದಲಕ್ಕೆ ಎಳೆಸದೆ, ಮಯೂರಾಸನದಲ್ಲಿ ಮಂಡಿಸಿದನು.

ಆಸನದ ಮಯೂರದ ಗರಿ ಸವರುತ್ತ ರಾಯನೆಂದ 'ಆಂಧ್ರಕವಿತಾ ಪಿತಾಮಹನಿಗೇಕೆ ಇಂದು ಎಂದಿಲ್ಲದ ಮೌನ?'

ಈ ಬಿರುದಾಂತನಾರೆಂದು ತೆಲುಗು ಕವಿಗಳೆಲ್ಲ ಚಕಿತರಾದರು. ತನ್ನನ್ನು ಉದ್ದೇಶಿಸಿಯೇ ರಾಯ ಮಾತನಾಡಿದುದೆಂದು ಪ್ರತಿ ತೆಲಗು ಕವಿಯೂ ಭ್ರಮಿಸಿದ. ನಂದಿ ತಿಮ್ಮನಂತೂ ಬಹು ಹೆಮ್ಮೆಗಾರ; ಈ ಮಾತು ತನಗೇ ಅನ್ವಯಿಸಿದುದೆಂದು ಆವನಿಗೆ ಖಂಡಿತ; ಎದ್ದು ನಿಂತು ಅರಸನಿಗೆ ಉತ್ತರವೀಯಬೇಕೆಂದುಕೊಂಡ. ಅಷ್ಟರಲ್ಲೇ ತೆನಾಲಿ ರಾಮಕೃಷ್ಣ ತಟಕ್ಕನೆ ನಿಂತು ಮಾತನಾಡತೊಡಗಿದ್ದ:

'ಪ್ರಭು. ತಾವು ಅನಿರೀಕ್ಷಿತವಾಗಿ ನನಗೆ ಕರೆದ ಮರ್ಯಾದೆಯ ಹೆಸರಿನಿಂದ ನಾ ಸಂತುಷ್ಟನಾಗಿದ್ದೇನೆ. ಆದರೆ ನನ್ನನ್ನು ಆಂಧ್ರಕವಿತಾಪಿತಾಮಹನೆಂದು ಕರೆಯುವುದಕ್ಕಿಂತ ಆಂಧ್ರಕವಿತಾಪ್ರಪಿತಾಮಹನೆಂದು ಕರೆಯುವುದು ಲೇಸು'

ವಿದೂಷಕ ರಾಮಕೃಷ್ಣನ ಮಾತಿಗೆ ಸಭಿಕರೆಲ್ಲ ಗೊಳ್ಳೆಂದರು. ಪೆದ್ದನ್ನ ಆಗಿನಿಂದಲೂ ಮನಸ್ಸಿನಲ್ಲೇ ನಗುತ್ತಿದ್ದ; ಆಂಧ್ರಕವಿತಾಪಿತಾಮಹ ತಾನೇ ಎಂದು ಅವ ಬಲ್ಲ.

ತೆನಾಲಿ ರಾಮಕೃಷ್ಣನ ಮಾತಿಗೆ ರಾಯ ಮುನಿಸುಗೊಂಡಂತೆ ತೋರಿತು; ಹುಸಿ ಮುನಿಸೇನೋ ರಾಯ ಬಲ್ಲ. ಬಾಯೇನೋ ಗದ್ದರಿಸಿತು 'ರಾಮಕೃಷ್ಣ. ನಿನಗೆ ಸರ್ವದಾ ಅಪಹಾಸ್ಯ. ಇನ್ನು ಮೇಲೆ ನನಗೆ ನಿನ್ನ ಮುಖದೋರಬೇಡ, ಹೋಗು'

ರಾಮಕೃಷ್ಣ ಧಡಧಡನೆ ಎದ್ದು ಹೋದನು.

ರಾಯನ ದೃಷ್ಟಿ ಪೆದ್ದನ್ನನ ಕಡೆ ನಿಂತಿತು. 'ಯಾರಿಗಿಲ್ಲದ ವಿನಮ್ರತೆ ನಿನಗೇಕೆ! ನಿನ್ನ ಹೆಮ್ಮೆಯನ್ನು ನಮ್ರತೆಯ ಮೂಲಕ ಪ್ರದರ್ಶಿಸುತ್ತಿದೀಯೇನು!'

ಪೆದ್ದನ್ನ ನಸುನಕ್ಕು ಮೆಲ್ಲನೆದ್ದು ನಿಂದನು. 'ಪ್ರಭು. ಬಿರುದನ್ನು ಇನ್ನೂ ನನಗೆ ದಯಪಾಲಿಸಿರುವುದಿಲ್ಲ. ಕವಿತಾಪಿತಾಮಹರು ತಾವೇ ಎಂದು ಹಲವರು ಭಾವಿಸುವಾಗ ನಾನೊಬ್ಬಮಾತ್ರ ಬೀಗಲೆಂತು!'

ರಾಯ ಕಾಶ್ಮೀರದ ಶಾಲು ತರಿಸಿದನು; ವರಾಹಲಾಂಛನವಿರುವ ವಜ್ರಪದಕ ತರಿಸಿದನು! ತೋರಮುತ್ತಿನ ಹಾರ ತರಿಸಿದನು; ಕವಿಗಂಡ ಪೆಂಡಾರ ತರಿಸಿದನು. ಮಯೂರಾಸನದಿಂದಿಳಿದು ಪೆದ್ದನ್ನನ ಬಳಿಸಿಂದು, ಅವನ ಕೊರಳಿಗೆ ತೋರಮುತ್ತಿನ ಹಾರವೇರಿಸಿದನು; ಎದೆಗೆ ಪದಕ ಸಿಕ್ಕಿಸಿದನು; ಭುಜಕ್ಕೆ ಶಾಲು ಹೊದಿಸಿದನು; ಕವಿಗಂಡ ಪೆಂಡಾರವನ್ನು ಪೆದ್ದನ್ನನ ಕಾಲ್ಗೆ ತಾನೇ ತೊಡಿಸಿದನು.

'ಆಂಧ್ರಕವಿತಾಪಿತಾಮಹ ನೀ' ಎಂದನು.

ಸಭಿಕರೆಲ್ಲ ತಲೆದೂಗಿದರು; ನಂದಿತಿಮ್ಮ ಮಾತ್ರ ಕರುಬಿದನು. ರಾಯ ಅಂಬಾರಿಯಲ್ಲಿ ಎಂದಾದರೂ ಸಾಗುತ್ತಿದ್ದು ಪೆದ್ದನ್ನ ಹಾದಿಯಲ್ಲಿ ನಡೆದು ಹೋಗುತ್ತಿದ್ದರೆ, ರಾಯ ಆನೆಯನ್ನು ನಿಲ್ಲಿಸಿ, ತಾನೇ ಕೈನೀಡಿ ಪೆದ್ದನ್ನನಿಗೆ ಆನೆ ಹತ್ತಲು ಆಸರೆಯಾಗಿ ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಳ್ಳುತ್ತಿದ್ದುದು ಎಲ್ಲರಿಗೂ ನೆನಪಾಯ್ತು.

ಪೆದ್ದನ್ನ ಸ್ವವಿರಚಿತ 'ಮನು ಚರಿತ್ರಮು' ಮಹಾಕಾವ್ಯದ ಓಲೆಗರಿ ಪ್ರತಿಯನ್ನು ತಂದು ಸಮರ್ಪಣೆಯ ಸಂಕೇತವಾಗಿ ಪ್ರಭುವಿನ ಪದತಲದಲ್ಲಿಟ್ಟು, ಪ್ರಭುವಿನ ಪದಯುಗ್ಮದಮೇಲೆ ಬಿಳಿ ಗುಲಾಬಿಗಳನ್ನು ಪೇರಿಸಿದನು. ಕವಿ ಕೇಳಿದ ಹಳ್ಳಿಗಳನ್ನು, ಅಗ್ರಹಾರಗಳನ್ನು ರಾಯ ಅವನಿಗೆ ಕಾಣಿಕೆ ನೀಡಿದನು.

ಸಭಿಕರು ಕಕ್ಕಾವಿಕ್ಕಿಯಾಗಿ ನೇಪಥ್ಯದೆಡೆ ದಿಟ್ಟಿಸಿದರು. ವಿಕೃತಾಕೃತಿಯೊಂದು ಬರುತ್ತಿದ್ದುದು ಕಂಡಿತು. ಹತ್ತಿರವಾದಮೇಲೆ ಅದು ಮುಖಕ್ಕೆ ಮಡಿಕೆ ಕವಿಚಿಕೊಂಡ ವ್ಯಕ್ತಿಯೆಂದು ಭ್ಯಾಸವಾಯ್ತು. ಇನ್ನೂ ಹತ್ತಿರವಾಗಲು, ಅದು ತೆನಾಲಿ ರಾಮಕೃಷ್ಣನ ಆಕೃತಿಯೆಂದು ಸ್ಪಷ್ಟವಾಯಿತು. ಕಣ್ಣು ಕಾಣಲು ಮಡಿಕೆಗೆ ಎರಡು ತೂತು ಮಾಡಿದ್ದನು. ಎಲ್ಲ ನಗತೊಡಗಿದರು.

'ಇದೇನೀ ಅವ್ಯವಸ್ಥೆ! ಹೀಗೇಕೆ ಬಂದೆ ಇಲ್ಲಿ? ಮತ್ತೆ ಬರಬೇಡೆಂದು ನಾ ಹೇಳಿದ್ದರೂ ಕೂಡ?' ರಾಯ ಪ್ರಶ್ನಿಸಿದ.

'ನಾನು ಮತ್ತೆ ಮುಖ ತೋರಿಸಬಾರದೆಂದು ಅಪ್ಪಣೆಯಾಗಿತ್ತಲ್ಲದೆ, ಇಲ್ಲಿಗೆ ಬರಬಾರದೆಂದಲ್ಲ. ಆಜ್ಞಾನುಸಾರ ನನ್ನ ಮುಖ ಕಾಣದಂತೆ ಮಡಿಕೆ ಕವಿಚಿಕೊಂಡಿದೇನೆ'

ಸಭಿಕರು ನಕ್ಕರು.

'ನಿನ್ನ ಚಾತುರ್ಯ ಮೆಚ್ಚುವಂಥದೇ ಸರಿ. ನಿನಗೇನು ಬಹುಮಾನಬೇಕು?' ರಾಯ ಕೇಳಿದ.

ತೆನಾಲಿ ರಾಮಕೃಷ್ಣ ಅಪೇಕ್ಷಿಸಿದ ಅಗ್ರಹಾರ ಕಾಣಿಕೆ ದೊರೆಯಿತು. ರಾಯನ ಕೋಪವನ್ನು ಕೆಣಕಿ, ತಾವೂ ಮಡಕೆಗೆ ತೂತು ಹೊಡೆದಿದ್ದರೆ ತಮಗೂ ಅಗ್ರಹಾರ ಸಿಗುತ್ತಿತ್ತು, ಎಂದು ತಹಿತಹಿಸಿದರು ಕೆಲವು ಕುಕವಿಗಳು.





# ಅರಿಯುಬಲ್ಲವರಾರು ಆಗುಹೋಗುಗಳನ್ನು

ಭುವನವಿಜಯದ ಒಳ ಅಂಗಳದಲ್ಲಿ ಬೆಳ್ಳಿಯ ಸರಪಣಿಗೆ ನೇತಿದ್ದ ಹೊನ್ನ ಹಲಗೆಯ ತೂಗುಯ್ಯಾಲೆಯಲ್ಲಿ ಕುಳಿತು ರಾಣಿ ತಿರುಮಲದೇವಿ ಮೆಲಿತಾಗಿ ತೂಗಿಕೊಳ್ಳುತ್ತಿದ್ದಳು. ಶ್ರೀರಂಗಪಟ್ಟಣದ ಅರಸು ಕುಮಾರವೀರಯ್ಯನ ಮುದ್ದುಕುವರಿಯಾಗಿ ಸುಖತಲ್ಪದಲ್ಲಿ ಹುಟ್ಟಿ ಬೆಳೆದವಳು; ಕರ್ಣಾಟಕ ಸಾರ್ವಭೌಮನ ಪಟ್ಟಮಹಿಷಿಯಾಗಿ ಸುಖಸಾಮ್ರಾಜ್ಯದಲ್ಲಿ ವಿಹರಿಸಿದವಳು. ಬಹು ಸಂಖ್ಯೆಯ ಸವತಿಯರಿದ್ದರೂ ಸವತಿಮಾತ್ಸರ್ಯ ಸುಳಿಯದಂತೆ ಭರ್ತನ ನಡವಳಿಕೆ. ಎಂದೂ ಅಸುಖದ ಸೋಂಕೇ ಅರಿಯದವಳು. ಈಚೀಚೆಗೆ ಒಮ್ಮೊಮ್ಮೆ ಒಂದೊಂದು

ಚಿಂತಾರೇಖೆ ಅವಳ ಸುಸ್ನಿಗ್ಧ ನಿರ್ಮಲ ಭಾಳದಲ್ಲಿ ಮೂಡುವುದು. ತನ್ನ ಮನವನ್ನು ಭರ್ತನೆದುರು ಬಿಚ್ಚಬೇಕೆಂದು ಹಲವು ಬಾರಿ ಬಯಸಿದವಳು ಅದೇಕೋ ಅವನೆದುರು ಅವಳ ಬಾಯೇ ತೆರೆಯದು ಈ ವಿಚಾರದಲ್ಲಿ. ಅಂತರಂಗದ ಆಲೋಚನೆಯನ್ನು ಇಂದು ಒಡೆದು ನುಡಿಯಲೇಬೇಕೆಂದು ನಿಶ್ಚಯಿಸಿದ್ದಳು. ಮಧ್ಯಾಹ್ನದ ಸುಖನಿದ್ರೆಯಿಂದ ಅರಸ ಎಚ್ಚೆತ್ತಕೂಡಲೇ ತನಗೆ ತಿಳಿಸಬೇಕೆಂದು ದಾಸಿಗೆ ಆಣತಿಸಿದ್ದಳು. ಅರಸ ಏಳುವ ವೇಳೆಗೆ ತಾನೆಲ್ಲಿ ನಿದ್ರಾಮುದ್ರಿತೆಯಾಗಿ ಇಂದು ಅವಕಾಶ ತಪ್ಪಿಹೋದೀತೋ, ಎಂದು ಅವಳಿಂದು ನಿದ್ರಿಸುವ ಗೋಜಿಗೇ ಹೋಗಲಿಲ್ಲ. ತರುಚ್ಛಾಯೆಯ ತಂಪಿನಲ್ಲಿ, ಉಪವನದ ಕುಸುಮಸುಗಂಧಿತಪವನದ ಕಂಪಿನಲ್ಲಿ ತೂಗುಯ್ಯಾಲೆಯ ಹಿತದಲ್ಲಿ ಕುಳಿತಿದ್ದಳು, ಮೆಲುದನಿಯಲ್ಲಿ ಗೀತಿಕೆಯೊಂದನ್ನು ನುಡಿಯುತ್ತ. ರಾಯಕಣ್ದೆರೆದವನೆ ಪಟ್ಟಮಹಿಷಿಯ ಕೊರಲುಕೇಳಿ ವಿಲಸಿತನಾಗಿ ಮಂದಹಾಸಯುಕ್ತನಾದನು. ಅರಸ ಎಚ್ಚರಗೊಂಡುದನ್ನು ಅರಿತು ದಾಸಿ ಮೆತುವಾಗಿ ಹೆಜ್ಜೆಯಿಟ್ಟು ಬಂದು, ರಾಣಿಗೆ ಅರುಹಿದಳು. ತಿರುಮಲದೇವಿ ತಟಕ್ಕನೆ ತೂಗುಮಂಚವನ್ನು ಬಿಟ್ಟೆದ್ದು ಸಸಂಭ್ರಮದಿಂದ ಭರ್ತನ ಬಳಿವಂದಳು.

' ಹೊಸನಿದ್ದೆಯ ಮುಸುಕು ಹರಿದೆದ್ದವನು ರಾಣಿಯ ಮಧುರಸ್ವನವನ್ನು ಆಲಿಸುತ್ತ ಸುಖಿಸಿದೆ. ರಾಣಿ ನಡುವೇ ಎದ್ದು ಬಂದು ಸುಖಭಂಗಮಾಡಿದುದೇಕೆ ? '

' ಅರಸನ ಮಧುರಸ್ವನವನ್ನು ಆಕರ್ಣಿಸಲು '

' ಏನೆಂದು ? '

' ನನಗೆ ಬಹು ದಿನಗಳ ಹಂಬಲ....'

' ನನ್ನಲ್ಲೂ ಸಂಕೋಚವೇ ! '

' ತಿರುಮಲ ಯುವರಾಜನಾಗಬೇಕೆಂದು '



ಕೃಷ್ಣದೇವರಾಯ ತಡೆಯಲಾರದೆ ನಕ್ಕನು. 'ರಾಣಿ. ಯುವರಾಜನಿನ್ನಾರು ? ತಿರುಮಲನೇ ಅಲ್ಲವೆ ?'

'ಸಂದೇಹವೇನು ! ಯೌವರಾಜ ಪಟ್ಟಾಭಿಷೇಕವಾಗಬೇಕೆಂದು.'

'ಬೇಡ, ಬೇಡ'

ರಾಣಿ ಬೆಚ್ಚಿದಳು. ಬಿಡುಗಣ್ಣು ಬಿಟ್ಟು ಭರ್ತನನ್ನು ದುರುದುರು ನೋಡಿದಳು ; ಕಂಗಳಲ್ಲಿ ನೀರ ತೆಳುತೆರೆ ಮುಸುಕಿತು. 'ಹಾಗಾದರೆ ಯುವರಾಜನಾರು ? ನಾನೇ ಪಟ್ಟಮಹಿಷಿಯಲ್ಲವೆ ! ಸವತಿಯರಲ್ಲೊಬ್ಬರ ಮಗನಿಗೆ ಯೌವರಾಜ್ಯಾಭಿಷೇಕವೇನು ? ಹಾಗಾದರೆ ತಿರುಮಲ ಹೆಸರಿಗೆ ಮಾತ್ರ ಯುವರಾಜ !'

ರಾಯನ ಮೊಗ ಗಂಭೀರವಾಯ್ತು. 'ಯುವರಾಜನಲ್ಲ, ಮಹಾರಾಜ'.

ರಾಣಿಯ ಕಂಗಳಿಂದ ಬಿಸಿಯ ಹನಿ ಜಕ್ಕನೆ ಜಗುಳಿದವು. 'ನನಗೆ ಮಾಂಗಲ್ಯಲೋಪವೆ ! ಅರಸರಿಗೆ ಅಲ್ಪಾಯುಸ್ಸೇನು ?'

'ರಾಣಿ, ಈ ಬಗೆಗೆ ಬಹು ದಿನಗಳಿಂದ ಆಲೋಚಿಸಿದೇನೆ. ವಿಜಯನಗರದ ಸಿಂಹಾಸನಕ್ಕಾಗಿ ನನ್ನ ಪೂರ್ವಿಕರಲ್ಲಿ ಎಂಥ ಕಲಹ, ಕಾದಾಟಗಳು ಉದ್ಭವಿಸಿ ಸಾಮ್ರಾಜ್ಯದ ಅಸ್ತಿವಾರವೇ ಅಬಲವಾಗುವಂಥ ಸಂದರ್ಭಗಳು ಉದಿಸಿವೆ.

ನನ್ನ ಅನಂತರ ಯಾರು ಕರ್ಣಾಟಕಾಧೀಶ್ವರನಾಗಬೇಕೆಂದು ಅರಸುಮನೆತನಗಳಲ್ಲಿ ಕಲಹಗಳು ಉಂಟಾಗುವುದು ನನಗೆ ಸರ್ವಥಾ ಅನಪೇಕ್ಷಿತ. ಮುಂದಿನ ತಲೆಮಾರಾದರೂ ಈ ಅಂತಃಕಲಹದಿಂದ ಮುಕ್ತವಾಗಲೆಂದು ನಾನೊಂದು ಹಂಚಿಕೆ ಹಾಕಿದೇನೆ. ನಾ ಸಿಂಹಾಸನಪರಿತ್ಯಾಗಮಾಡಿ ಈಗಲೆ ತಿರುಮಲದೇವನಿಗೆ ರಾಜ್ಯಾಭಿಷೇಕ ಮಾಡುವುದು; ನನ್ನ ನಂತರದ ಅರಸು ನಿಶ್ಚಿತನಾದನಲ್ಲ! ನನ್ನ ತಮ್ಮದಿರಾಗಲಿ, ವೀರನರಸಿಂಹನ ಪುತ್ರನಾಗಲಿ ಗದ್ದುಗೆಗಾಗಿ ಅಂತಃಕಲಹ ವನ್ನೆಸಗುವುದು ತಪ್ಪುವುದು '.

ರಾಣಿಯ ದುಃಖಾಶ್ರು ಆನಂದಾಶ್ರುವಾಯ್ತು; ದುಃಖದಿಂದ ಕುಗ್ಗಿದಮೊಗ ಸಂತಸದಿಂದ ಹಿಗ್ಗಿತು. ' ಏನು! ತಿರುಮಲ ಈಗಲೇ ಸಾರ್ವಭೌಮನೆ! ನಾ ರಾಜಮಾತೆಯೆ! '

ಗಂಭೀರವಾಗಿದ್ದ ರಾಯನಮೊಗದಲ್ಲಿ ಕಿರುನಗೆ ಲಾಸ್ಯವಾಡಿತು. ' ನಾನು ರಾಜ್ಯಚ್ಯುತನಾಗುವುದು ನಿನಗೆ ಚಿಂತೆಯಿಲ್ಲ; ನಿನ್ನ ಮಗ ರಾಜ್ಯಾಭಿಷಿಕ್ತನಾಗುವುದು ಮಾತ್ರ ನಿನಗೆ ಸಂತೋಷಕರ. ಭರ್ತನಿಗಿಂತ ಪುತ್ರ ಹೆಚ್ಚೇನು?'

ಉಲ್ಲಸಿತವಾಗಿದ್ದ ರಾಣಿಯಮೊಗ ಗಂಭೀರವಾಯ್ತು. ' ಭರ್ತ ಅರಸಾಗಿದ್ದೇ ಪುತ್ರನೂ ಅರಸಾಗುವನು; ಭರ್ತನ ನಂತರ ಪುತ್ರನೇ ರಾಜ್ಯಾಧಿಕಾರಿಯಾಗುವನೆಂಬುದು ದೃಢವಾಗುವುದು. ರಾಜಪತ್ನಿಯಾಗಿದ್ದೇ ರಾಜ ಮಾತೆಯೂ ಆಗಿರುವೆನು. ಇದು ಸಂತೋಷಕರವಲ್ಲವೆ?'

* * * *

ವಿಜಯಸಾಮ್ರಾಜ್ಯದಲ್ಲೆಲ್ಲ ಉತ್ಸಾಹದ ಕಲ್ಲೋಲ; ರಾಜಧಾನಿಯಲ್ಲಿ ಆನಂದ ಕೋಲಾಹಲ. ಎಂಟು ವರ್ಷದ ತಿರುಮಲದೇವನಿಗೆ ಇಂದು ರಾಜ್ಯಾಭಿಷೇಕ. ರಾಜಧಾನಿಯ ಮನೆಮನೆಯೂ ರಂಗವಲ್ಲಿ ಕಾರಣೆಗಳಿಂದ, ತಳಿರು ತೋರಣಗಳಿಂದ ಅಲಂಕೃತವಾಗಿದೆ; ಬೀದಿಬೀದಿಗಳು ಹಸುರೆಲೆಗಳಿಂದ ಬಣ್ಣದ ಬಾವುಟಗಳಿಂದ ಶೋಭಾಯಮಾನ

ವಾಗಿವೆ. ದೇಗುಲಗಳಲ್ಲೆಲ್ಲ ವಿಶೇಷ ಪೂಜಾವಿಧಿಗಳು ನಡೆಯುತ್ತಿವೆ; ಗಂಟೆಜಾಗಟೆ ಶಂಖಗಳ ನಿನಾದ ಎಲ್ಲ ದೇಗುಲಗಳಿಂದಲೂ ಹೊರಹೊಮ್ಮುತ್ತಿದೆ; ಹಲವೆಡೆಗಳಿಂದ ಹೋಮಧೂಮ ಮೇಲೇರುತ್ತಿದೆ. ರಾಜಧಾನಿಯ ನಾಗರಿಕರು ದೈನಂದಿಕ ಉದ್ಯಮಗಳಿಂದ ವಿರಮಿತರಾಗಿ, ವಿನೋದ ವಿಲಾಸಗಳಲ್ಲಿ ಮಗ್ನರಾಗಿದ್ದಾರೆ; ಮಲ್ಲಯುದ್ಧ, ಅಶ್ವನೃತ್ಯ, ಭರತನಾಟ್ಯ, ಕೋಲಾಟಗಳ ನೋಟಗಳಲ್ಲಿ ಮೈಮರೆತಿದ್ದಾರೆ. ಎಲ್ಲೆಲ್ಲೂ ಹಿಗ್ಗಿನ ಹೊನಲು ಹರಿದಿದೆ

ಸಾಮ್ರಾಜ್ಯದ ಸಾಮಂತ, ಪ್ರಾಂತಾಧಿಕಾರಿ, ದಳಪತಿ, ನಾಯಕರೆಲ್ಲ ಸಡಗರದಿಂದ ಉಚಿತ ಪರಿವಾರದೊಂದಿಗೆ ರಾಜಧಾನಿಗೆ ಐತಂದಿದ್ದಾರೆ. ಸಾಮಾನ್ಯವಾಗಿ ಹಿರಿಯ ಅಧಿಕಾರಿಗಳಿಗೆಲ್ಲ ಸಂತುಷ್ಟಿ, ಇಂದಿನ ಏರ್ಪಾಟಿನಿಂದ ಕೃಷ್ಣದೇವರಾಯನ ನಂತರ ರಾಜ್ಯಾರೋಹಣಕ್ಕಾಗಿ ಅಂತಃಕಲಹಗಳು ನಿವಾರಿತವಾಗುವುವೆಂದು. ಉತ್ಕಲ ಬಿಜಾಪುರಗಳಿಂದಲೂ ಪಾರಸೀಸ್ಥಾನ ಪೋರ್ಚುಗಲ್‌ಗಳಿಂದಲೂ ರಾಯಭಾರಿಗಳು ಈ ಸಮಾರಂಭಕ್ಕಾಗಿಯೆ ಆಗಮಿಸಿದ್ದಾರೆ.

ಭುವನವಿಜಯದ ಸಭಾ ಮಂದಿರ ಇಂದು ವಿಶೇಷ ರೀತಿಯಿಂದ ಅಲಂಕೃತ. ಹೊರನಾಡುಗಳ ಅತಿಥಿ ರಾಯಭಾರಿಗಳೆಲ್ಲ, ಸಾಮ್ರಾಜ್ಯದ ಹಿರಿಯ ಅಧಿಕಾರಿಗಳೆಲ್ಲ, ಪೌರ ಪ್ರಮುಖರೆಲ್ಲ ವೈವಿಧ್ಯಪೂರ್ಣ ವಸ್ತ್ರಭೂಷಣಗಳಿಂದ ವಿಜೃಂಭಿತರಾಗಿ ಉಚಿತಾಸನಗಳಲ್ಲಿ ಮಂಡಿಸಿದ್ದಾರೆ. ಪಟ್ಟವಸ್ತ್ರ ವಿಭೂಷಿತನಾದ ಸುಂದರ ಕುಮಾರನ ಬೆರಳ್ವಿಡಿದು ರಾಯ ಗಜಗಮನದಿಂದ ಸಭಾಪ್ರವೇಶಮಾಡುವ ವೇಳೆಗೆ ಉಪವಿಷ್ಟರಾದವರೆಲ್ಲ ಉತ್ತಿಷ್ಠರಾಗಿದ್ದರು. ತಿರುಮಲದೇವ ಸಿಂಹಾಸನದಲ್ಲಿ ಮಂಡಿಸಿದನು. ಧರ್ಮಗುರು, ಮಂತ್ರಾಲೋಚಕ ವ್ಯಾಸರಾಯರೂ, ಮತಗುರು ಬ್ರಹ್ಮಣ್ಯತೀರ್ಥರೂ ಪಟ್ಟಾಭಿಷೇಕದ ವಿಧಿಗಳನ್ನೆಲ್ಲ ಸಾಂಗವಾಗಿ ಪೂರೈಸಿದರು. ವೈತಾಳಿಕರು ನೂತನ ರಾಜನ ಬಿರುದುಗಳನ್ನು ಉಗ್ಗಡಿಸಿದರು :

ಸ್ವಸ್ತಿಶ್ರೀ

ಭುವನಾಧೀಶ್ವರ
ಸಮಸ್ತ ರಾಜಾಧಿರಾಜ ರಾಜಪರಮೇಶ್ವರ
ಶ್ರೀಮದ್ದಕ್ಷಿಣ ಸಮುದ್ರಾಧಿಪತಿ
ಕೃಷ್ಣರಾಯ ಮಹಾರಾಯ ತನೂಭವ
ಸಕಲ ಭೂಮೀಶ್ವರ ಸಿಕರ ಮಕುಟ ವಿನ್ಯಸ್ತ ಚರಣಾರವಿಂದ ಯುಗಳ
ಸರ್ವ ಭುವನ ಪ್ರಚಾರ
ವೀರಲಕ್ಷ್ಮೀ ಸಮಾಕರ್ಷಣ
ತಿರುಮಲದೇವ ಮಹಾರಾಯ.

ಸಾಮಂತರು, ಅಧಿಕಾರಿಗಳು, ಪೌರಪ್ರಮುಖರು ಯಥಾಶಕ್ತಿ ಕಾಣಿಕೆಗಳನ್ನು ಸಮರ್ಪಿಸಿದರು. ಬಾಲರಾಜನ ಬೆರಳ್‌ವಿಡಿದು ಕೃಷ್ಣರಾಯ ನಿರ್ಗಮಿಸಿದ ನಂತರ, ಎಲ್ಲರೂ ನಿರ್ಗಮಿಸಿದರು.

ಪಟ್ಟಬಂಧ ಮಹೋತ್ಸವದ ಸಂತೋಷ ಸಮಾರಂಭವನ್ನು ಸಾಮ್ರಾಜ್ಯದಲ್ಲೆಲ್ಲ ಮುಂದಿನ ಎಂಟು ತಿಂಗಳ ಕಾಲ ಆಚರಿಸಲಾಯ್ತು. ಈ ಅವಧಿಯಲ್ಲಿ ಕರ್ಣಾಟಕಸಾಮ್ರಾಜ್ಯದ ಜನತೆ ವಿವಿಧ ಉತ್ಸವ, ವಿನೋದ, ಪ್ರದರ್ಶನ, ಪೂಜೆ ಪುರಸ್ಕಾರಗಳಿಂದ ಸಂತೋಷ ಪುಳಕಿತವಾಯ್ತು.

ಕೃಷ್ಣದೇವರಾಯನಿಂದು ಕರ್ಣಾಟಕ ಸಾಮ್ರಾಜ್ಯದ ಸಾರ್ವಭೌಮನಲ್ಲ; ಮಹಾ ಮಂತ್ರಿ. ಮಹಾಮಂತ್ರಿಯಾಗಿದ್ದ ಸಾಳುವ ತಿಮ್ಮ ಇಂದು ಸಹಾಯಕಮಂತ್ರಿ. ಸಾಳುವ ತಿಮ್ಮನ ಹಿರಿಯ ಮಗ ದಣ್ಣಾಯಕನನ್ನು ಬೆಂಗಳೂರ ಪ್ರಾಂತಾಧಿಕಾರಿಯ ಸ್ಥಾನಕ್ಕೆ ಏರಿಸಲಾಯ್ತು. ಇಂದು ಸಿಂಹಾಸನದಲ್ಲಿ ಆರೂಢನಾಗುವವನು ಎಂಟು ವಯಸ್ಸಿನ

ತಿರುಮಲದೇವ. ತಾನು ಪ್ರಜೆಯಾದಮೇಲೆ ಅರಸನೆದುರು ಉಚಿತ ಮರ್ಯಾದೆಯಿಂದಲೇ ನಡೆದುಕೊಳ್ಳಬೇಕು; ಆಸ್ಥಾನದಲ್ಲಿ ತಿರುಮಲ ಸಿಂಹಾಸನಾರೂಢನಾದಾಗ ಕೃಷ್ಣದೇವರಾಯ ಇತರ ಆಸ್ಥಾನಿಕರಂತೆಯೇ ತಾನೂ ಅರಸನಿಗೆ ಪ್ರಣಮಿಸಿ ಗೌರವದಿಂದ ವರ್ತಿಸುತ್ತಿದ್ದನು. ಬಾಲರಾಜ ತಿರುಮಲದೇವನ ಅಂಕಿತದಲ್ಲಿ ಮಹಾಮಂತ್ರಿ ಕೃಷ್ಣದೇವರಾಯನಿಂದ ರಾಜ್ಯಭಾರದ ನಿರ್ವಹಣೆ. ತನ್ನ ಕಾಲದಲ್ಲಿ ಸುಭದ್ರವಾಗಿ ಕೀರ್ತಿಪ್ರದವಾಗಿ ವಿರಾಜಮಾನವಾದ ಸಾಮ್ರಾಜ್ಯ ತನ್ನಣುಗನ ಕಾಲದಲ್ಲಿ ಇನ್ನೂ ಹೆಚ್ಚು ಶೋಭಾಯಮಾನವಾಗುವುದೆಂದು ರಾಯನಿಗೆ ಮನಸ್ಸಿನಲ್ಲೇ ಸಂತೋಷ.

ಅಂದು ರಾಯ ಮುಂಜಾನೆ ಎದ್ದವನೆ ಎಂದಿನಂತೆ ಅಂಗಸಾಧನೆಯನ್ನು ಮುಗಿಸಿದನು. ಅರಮನೆಗೆ ಹಿಂದಿರುಗಿದಾಗ ಸೂರ್ಯನ ಕೆಂಬೆಳಕು ಮೂಡಣ ದೆಸೆಯಲ್ಲಿ ನಸುನಸುವಾಗಿ ಏರುತ್ತಿತ್ತು. ರಾಯ ಭುವನವಿಜಯದ ದ್ವಾರ ಪ್ರವೇಶಮಾಡುವಾಗ, ತಿರುಮಲನಿಗೆ ಶಸ್ತ್ರಾಭ್ಯಾಸ ಕೊಡುವ ಶ್ರೀರಂಗಪಟ್ಟಣದ ಮಾರನಾಯಕ ಅವನತಮುಖಿಯಾಗಿ ಹೊರನಡೆದಿದ್ದನು.

'ಮಾರನಾಯಕ!'

ಮಾರನಾಯಕ ತಲೆವಾಗಿ ಪ್ರಣಮಿಸಿದನು

'ಬಿಲ್‌ವಿದ್ಯಾಭ್ಯಾಸ ಇಷ್ಟು ಬೇಗ ಮುಗಿಯಿತೆ?'

'ಇಲ್ಲ'

'ಮತ್ತೆ?'

'ಚಿಕ್ಕಪ್ರಭು ಇನ್ನೂ ಎದ್ದಿಲ್ಲ'

'ಆದೇನು?'

‘ಅದೇಕೋ ಈಚೆಗೆ ಬರುಬರುತ್ತ ನಿಶ್ಶಕ್ತಿ, ಇಂದು ಹಾಸಿಗೆ ಬಿಟ್ಟು ಏಳಲೂ ಅಪೇಕ್ಷೆಯಿರಲಿಲ್ಲ. ನಾ ಏನೂ ಹೇಳಲಾರದೆ ಕಾದು ಸುಮ್ಮನಾದೆ’.

‘ಬೊಮ್ಮಪಂಡಿತ ನಾಡಿಪರೀಕ್ಷೆ ಮಾಡಿದನೆ?’

‘ನೆನ್ನೆ ಮಾಡಿದ್ದ; ಈ ದಿನವೂ ಮಾಡಿದ. ಯಾವ ರೋಗ ಚಿಹ್ನೆಯೂ ಇಲ್ಲ, ಎನ್ನುತ್ತಾನೆ’.

ರಾಯ ನೇರವಾಗಿ ಮಹಡಿಯ ಕೊಠಡಿಗೆ ಹೋದ. ವಾತಾಯನದಾಚೆಯ ನೀಲಾಕಾಶವನ್ನು ಅರ್ಥಹೀನವಾಗಿ ದಿಟ್ಟಿಸುತ್ತ, ಹೊನ್ನಮಂಚದಲ್ಲಿ ಒರಗಿದ್ದ ತಿರುಮಲನ ಮೊಗ ಬಿಳಿಚಿತ್ತು. ಅವನ ಕಣ್ಗಳು ಹೊಳೆಯುತ್ತಲೇ ಇದ್ದರೂ, ಮೊಗ ಅಗಲದಲ್ಲಿ ಕಡಿಮೆಯಾಗಿತ್ತು. ತಲೆಗೂದಲು ಅಸ್ತವ್ಯಸ್ತ. ಇಂಥ ಸೊರಗಿದ ಬಗೆಯಲ್ಲೂ ಮನೋಹರನಾಗಿದ್ದ ಕುಮಾರನನ್ನು ರಾಯ ಮೈಯೆಲ್ಲ ಕಣ್ಣಾಗಿ ನಿಟ್ಟಿಸಿದ. ರಾಯ ಸದ್ದಿಲ್ಲದೆ ಪ್ರವೇಶಿಸಿದ್ದು, ಅವನ ಆಗಮನವೂ ತಿರುಮಲನಿಗೆ ಅರಿವಿಲ್ಲ.

‘ನಿದ್ದೆಯಾಯಿತೆ, ತಿರುಮಲ!’

ತಿರುಮಲನ ದಿಟ್ಟಿ ತಟಕ್ಕನೆ ದನಿಯ ಕಡೆ ಹೊರಳಿತು. ತಾನೇನೋ ಅಪರಾಧ ಮಾಡಿದವನಂತೆ, ಮಾಡಿದ ಅಪರಾಧ ಕಂಡುಹಿಡಿಯಲ್ಪಟ್ಟಂತೆ ನಾಚಿದನು. ಹೊದಿಕೆಯನ್ನು ಕಾಲಲ್ಲೊದೆದು ಮೆಲ್ಲನೆ ಎದ್ದು ಕುಳಿತನು.

‘ಅಷ್ಟೊಂದು ನಿಶ್ಶಕ್ತಿಯೆ? ಅನಾರೋಗ್ಯವೆ?’

ತಿರುಮಲ ಇನ್ನೂ ಹಾಸಿಗೆಯಲ್ಲಿದ್ದುದನ್ನು ಕೇಳಿ ರಾಣಿಯೂ ಆಗಮಿಸಿದ್ದಳು. ‘ಅನಾರೋಗ್ಯವಲ್ಲ, ದೃಷ್ಟಿ! ದೃಷ್ಟಿ! ಬಾಲರಾಜನ ಮೋಹನ ಮೂರ್ತಿಯಮೇಲೆ ಎಲ್ಲರ ಕಣ್ಣು ಬಿದ್ದು ದೃಷ್ಟಿಯಾಗಿದೆ ದೃಷ್ಟಿ ಪರಿಹಾರಕ್ಕಾಗಿ ತಾಯಿತ ಕಟ್ಟಿಸಬೇಕು’.

ಮತಗುರು ಬ್ರಹ್ಮಣ್ಯತೀರ್ಥರಿಂದ ತಾಯಿತ ಕಟ್ಟಿಸಲಾಯ್ತು; ಸ್ವತಃ ವ್ಯಾಸರಾಯರಿಂದ ಹೋಮಹವನ ನಡೆಸಲಾಯ್ತು. ಹೋಮ ಮುಗಿದ ಮಾರನೆಯದಿನ ತಿರುಮಲನ ಮೈ ತಣ್ಣಗಾಯ್ತು. ಗೋವೆಯಿಂದ ಕರೆಸಲ್ಪಟ್ಟು ಅಂದೇ ವಿಜಯನಗರಕ್ಕೆ ಬಂದ ಪೋರ್ಚುಗೀಸ್ ಡಾಕ್ಟರರು ಪರೀಕ್ಷೆಮಾಡಿ ವಿಷಪ್ರಯೋಗ ನಡೆದಿದೆಯೆಂದು ತೀರ್ಮಾನಿಸಿದರು.

ವಿಷ! ವಿಷ! ವಿಷ! ಎಂಬ ಮಾತು ಗಳಿಗೆಯೊಳಗೆ ಅರಮನೆಯುಳ್ಳೆಲ್ಲ ಹರಡಿತು. ಗಂಟೆಯೊಳಗೆ ವಿಜಯನಗರಕ್ಕೆಲ್ಲ ಹರಡಿತು. ಹೌದು! ವಿಷ! ವಿಷಪ್ರಯೋಗ! ಇಲ್ಲವಾದಲ್ಲಿ ಇದ್ದಕ್ಕಿದ್ದಂತೆ ಸಾಯಲುಂಟೆ ಬಂಗಾರದ ರಾಜಕುಮಾರ! ಆದರೆ ಅಭಿಯೋಗ ಮಾಡಿದವರು ಯಾರು ? ಯಾರು ? ಹಲವಾರು, ನೂರೆಂಟು ಊಹಾಪೋಹಗಳು ಗಾಳಿಯನ್ನು ಮುಸೆದವು. ಕೃಷ್ಣದೇವರಾಯನಿಗೆ ಸುದ್ದಿ ಬಂತು, ದಣ್ಣಾಯಕ, ಎಂದು; ಮಂತ್ರಿ ಸಾಳುವ ತಿಮ್ಮನ ಮಂತ್ರಾಲೋಚನೆಯ ಮೇರೆ ಅವನ ಹಿರಿಯ ಮಗ ದಣ್ಣಾಯಕ ಬಾಲರಾಜ ತಿರುಮಲದೇವನಿಗೆ ನಿಧಾನವಾಗಿ ಕೊನೆ ತರುವಂಥ ವಿಷಪ್ರಯೋಗ ಮಾಡಿದ, ಎಂದು; ಹಲವು ಜನದಿಂದ ಈ ಸುದ್ದಿ ಬಂತು.

ರಾಯ ಬೆಚ್ಚಿದ; ಬೆದರಿದ; ಕಂಬನಿ ಮಿಡಿದ; ಅವಡುಗಚ್ಚಿದ; ಕೋಪಗೊಂಡ; ಕೋಪದಿಂದ ಕಂಪಿಸಿದ; ಕ್ರೋಧೋನ್ಮತ್ತನಾದ. ತನ್ನ ಆಕಾಂಕ್ಷೆಯ ಪ್ರತೀಕವಾದ ಕುಮಾರ ಅನಿರೀಕ್ಷಿತವಾಗಿ, ಅಕಾಲಿಕವಾಗಿ ಅವಸಾನಗೊಂಡನೆಂಬ ಅತೀವ ವ್ಯಸನ; ದುರ್ಮರಣಗೊಂಡು ತನ್ನಾಸೆ ಭಗ್ನವಾಯ್ತೆಂಬ ಜೇಗುದಿ; ಕುಶಲ ಮಂತ್ರಾಲೋಚಕನಾಗಿ ಸಾಂರಾಜ್ಯ ಸಂರಕ್ಷಕನಾದ ಸಾಳುವ ತಿಮ್ಮನೇ ಇಂಥ ಹೊಲ್ಲಗೆಲಸಗೈದನೆಂಬ ಕ್ರೋಧ. ಬಾನೇ ತನ್ನ ತಲೆಯ ಮೇಲೆ ಕಳಚಿ ಬಿದ್ದಂತೆ ರಾಯ ಹೌಹಾರಿದನು.

ರಾಜಸಭೆ ಕರೆಯಲ್ಪಟ್ಟಿತು. ಪ್ರಮುಖ ಅಧಿಕಾರಿಗಳು, ಸೇನಾನಿದಳಪತಿಗಳು ಐತಂದಿದ್ದರು. ರಾಜಾಜ್ಞೆ

ಯಂತೆ ಸಾಳುವ ತಿಮ್ಮರಸನಲ್ಲದೆ ಅವನ ಮಕ್ಕಳಾದ ದಣ್ಣಾಯಕ, ಗೋವಿಂದರೂ ಸಾಳುವ ತಿಮ್ಮರಸನ ಹಲವು ಸಂಬಂಧಿಗಳೂ ಕರೆತರಲ್ಪಟ್ಟಿದ್ದರು. ಆಸ್ಥಾನಿಕರೆಲ್ಲರ ಮನದಲ್ಲೂ ತೀವ್ರ ಸಂದೇಹ, ಸಂದಿಗ್ಧತೆ ತುಯ್ಯಲಾಡುತ್ತಿದ್ದರೂ ಯಾರೂ ಪಿಸುಗುಸುಗುಟ್ಟುವುದೂ ಕೇಳುತ್ತಿರಲಿಲ್ಲ. ಸಾಳುವ ತಿಮ್ಮರಸ, ದಣ್ಣಾಯಕರಿಗೆ ಇಂದು ಎಂದಿನ ಗೌರವ ಪೀಠವಿಲ್ಲ; ಅಧೋದೃಷ್ಟಿಯುಳ್ಳವರಾಗಿ ಸಿಂಹಾಸನದಿಂದ ದೂರ ಗೋಡೆಗೆ ಆತು ನಿಂತಿದ್ದರು; ಭೀತಿಯಿಂದ ಕಳೆಗುಂದಿದ ಮೊಗವಲ್ಲ; ಪಶ್ಚಾತ್ತಾಪದ ಸೂಚನೆಯಿಲ್ಲ; ಶಿಕ್ಷೆಯ ದಿಗಿಲಿಲ್ಲ; ಗಂಭೀರ, ನಿಶ್ಚಿತ ಮುಖಮುದ್ರೆ.

ಕೃಷ್ಣದೇವರಾಯ ತಟಕ್ಕನೆ ಸಭಾಪ್ರವೇಶ ಮಾಡಿದಾಗ ಆಸ್ಥಾನಿಕರೆಲ್ಲ ಬೆಚ್ಚಿ ಎದ್ದು ನಿಂತರು. ಇಂದು ರಾಯನಿಗೆ ವಸನಗಳ ವಿಜೃಂಭಣೆಯಿಲ್ಲ; ದರ್ಪದ ಉಜ್ವಲತೆಯಿಲ್ಲ. ಸಾಮಾನ್ಯ ಉಡಿಗೆಯಲ್ಲಿ ಐತಂದಿದ್ದನು. ಉಜ್ವಲ ನಯನಗಳು ಇಂದು ವಿಷಣ್ಣ; ಮೊಗ ಶೋಕದಿಂದ ಕಂದಿ ತುಸು ಬಿಳುಪೇರಿತ್ತು. ಅಧೋವದನನಾಗಿ ಸಾಗಿ ಬಂದನು. ಎಂದಿನ ಗಜಗಂಭೀರ ಗಮನವಲ್ಲ; ವ್ಯಾಕುಲತೆಯಿಂದ ಈ ಅತ್ಯಲ್ಪ ಕಾಲದಲ್ಲೇ ಹತ್ತು ವರ್ಷ ಹೆಚ್ಚಿದಂತೆ ಸೋತ ಹೆಜ್ಜೆ. ಬರಿದಾಗಿದ್ದ ಸಿಂಹಾಸನದೆದುರು ಮೆಲ್ಲನೆ ಬಾಗಿ ಪ್ರಣಮಿಸಿ, ತನಗೆ ಮೀಸಲಾದ ಮಹಾಮಂತ್ರಿಯ ಸ್ಥಾನದಲ್ಲಿ ಕುಳಿತನು. ಸರ್ವದಾ ಪ್ರಸನ್ನ ಗಂಭೀರವಾಗಿರುತ್ತಿದ್ದ ರಾಯನ ವಿಷಣ್ಣವದನವನ್ನು ಈಕ್ಷಿಸಿ, ಆಸ್ಥಾನಿಕರೂ ಶೋಕಾಕುಲರಾಗಿ ಮೆಲ್ಲನೆ ಸ್ವಸ್ಥಾನಗಳಲ್ಲಿ ಕುಳಿತರು. ರಾಯನ ದಿಟ್ಟಿ ಸುತ್ತ ಒಮ್ಮೆ ತಿರುಗಿದುದು ಸಾಳುವ ತಿಮ್ಮರಸ, ದಣ್ಣಾಯಕರು ನಿಂತಿದ್ದೆಡೆ ಸ್ಥಿರವಾಯ್ತು. ತುಸು ತಡೆದು, ರಾಯನ ಬಾಯಿ ತೆರೆಯಿತು.

'ಅಪ್ಪಾಜಿ. ನಿನ್ನನ್ನು ನನ್ನ ಶ್ರೇಷ್ಠತಮ ಮಿತ್ರನೆಂದು ಪರಿಗಣಿಸಿದ್ದೆ. ಕಳೆದ ನಾಲ್ವತ್ತು ವರ್ಷಗಳಿಂದ ನೀನು ಕರ್ಣಾಟಕ ಸಾಮ್ರಾಜ್ಯದ ಮಹಾಮಂತ್ರಿಯಾಗಿ, ಚಾಲಕನಾಗಿದ್ದಿ. ನಿನ್ನ ಸಾಮರ್ಥ್ಯ ಚಾತುರ್ಯಗಳಿಂದ ಸಾಮ್ರಾಜ್ಯ ವಿಸ್ತರಿಸಿತು, ಬಲತರವಾಯ್ತು, ಅಭಿವೃದ್ಧಿಗೊಂಡಿತು. ಪ್ರತಿಫಲವಾಗಿ ನಿನಗೂ, ನಿನ್ನ ಮಕ್ಕಳಿಗೂ ಅತುಳ ಐಶ್ವರ್ಯ

ಅಧಿಕಾರ ಗೌರವಗಳನ್ನು ನೀಡಿದೇನೆ. ಈ ಸಾಮ್ರಾಜ್ಯವನ್ನು ನನ್ನ ಕೈಗಿತ್ತವನೂ ನೀನೆ; ಆದರೆ ಇದಕ್ಕಾಗಿ ನಾನು ನಿನಗೆ ಕೃತಜ್ಞನಾಗಿರಬೇಕಾಗಿಲ್ಲ. ಸಾಮ್ರಾಜ್ಯವನ್ನು ನನ್ನ ಹಸ್ತಗತಮಾಡಿ ನೀ ಕರ್ತವ್ಯ ಪರಾಙ್ಮುಖನಾದೆ; ಅಪಮಾನ ರಾಜದ್ರೋಹಿ ನೀ. ಅರಸ ವೀರನರಸಿಂಹ ನನ್ನ ಕಣ್ಣು ಕಿತ್ತು ತಾರೆಂದು ನಿನಗಾಣತಿಯಿತ್ತ; ಅರಸನ ಆಜ್ಞೆಯಂತೆ ವರ್ತಿಸುವುದು ಮಂತ್ರಿಯಾಗಿದ್ದ ನಿನ್ನ ಕರ್ತವ್ಯ; ನನ್ನ ಕಣ್ಣು ಕೀಳುವುದರ ಬದಲು ಆಡಿನ ಕಣ್ಣು ಕಿತ್ತು ತೋರಿ, ಮೃತ್ಯು ಶಯ್ಯೆಯಲ್ಲಿದ್ದ ಅರಸನಿಗೆ ಮೋಸಮಾಡಿದೆ; ಅರಸನ ಅಪೇಕ್ಷೆಯಂತೆ ವಿರೂಪಾಕ್ಷನನ್ನು ಗದ್ದಿಗೆಗೇರಿಸುವ ಬದಲು ಸೆರೆಮನೆಗೆ ಸೇರಿಸಿ ರಾಜದ್ರೋಹಿಯಾದೆ. ನನಗೆ ಪಟ್ಟಾಭಿಷೇಕ ಮಾಡಿ ವಚನಭಂಗ ಮಾಡಿದೆ.'

ರಾಯನ ಮನ ವಿರುದ್ಧ ಭಾವನೆಗಳ ತಿಕ್ಕಾಟದಲ್ಲಿ ಹೊಯ್ದಾಡಿತು; ಬಾಯ್ ತಡೆಯಿತು.

ಸಾಳುವ ತಿಮ್ಮ ರಾಯನ ಕಡೆಯೂ ಕಣ್ಣು ಹೊರಳಿಸದೆ, ಶೂನ್ಯ ಸಿಂಹಾಸನವನ್ನೆ ದಿಟ್ಟಿಸುತ್ತ ಮೆಲ್ಲನೆ ಎಂದನು. 'ನಾ ರಾಜದ್ರೋಹಿಯಾಗಿ ರಾಜ್ಯನಿಷ್ಠನಾದೆ. ಚಂಚಲವೃತ್ತಿಯ ಅಸಮರ್ಥ ಅರಸನ ಆಜ್ಞೆಯನ್ನು ಧಿಕ್ಕರಿಸಿ ಕರ್ಣಾಟಕಕ್ಕೆ ಮಹದುಪಕಾರ ಮಾಡಿದೆ. ವಿರೂಪಾಕ್ಷನನ್ನು ಸೆರೆಗೆ ಸೇರಿಸಿ, ಕೃಷ್ಣದೇವನನ್ನು ಗದ್ದುಗೆಗೆ ಏರಿಸಿದ ನನ್ನ ಕೃತ್ಯವನ್ನು ಇಂದು ಸಾಮ್ರಾಜ್ಯದ ಪ್ರಜಾಗಣವೆಲ್ಲ ಪ್ರಶಂಸಿಸುತ್ತಿದೆ; ಭವಿಷ್ಯತ್ ಇತಿಹಾಸಕಾರರೂ ಪ್ರಶಂಸಿಸುತ್ತಾರೆ.'

ಆಸ್ಥಾನಿಕರೆಲ್ಲ ತಲೆದೂಗಿದರು; ಇಂಥ ಮಾತಿಗೆ ರಾಯನ ಬಾಯ್ ಕಟ್ಟುವುದೆಂದು ಭಾವಿಸಿದರೂ, ಇದಕ್ಕೆ ಪ್ರತ್ಯುತ್ತರವೇನು ಬಂದೀತೆಂದು ರಾಯನನ್ನು ದಿಟ್ಟಿಸಿದರು. ರಾಯ ತುಸುವೂ ಚಂಚಲನಾಗದೆ, ವಿಕಾರವಶನಾಗದೆ, ಮೊದಲ ಶೋಕಾಕುಲ ಗಂಭೀರಸ್ವನದಲ್ಲಿ ನುಡಿದನು.

' ನನ್ನಣ್ಣನ ಕೊನೆಗಾಲದಲ್ಲಿ ಅವನಾಜ್ಞೆಯನ್ನು ಧಿಕ್ಕರಿಸಿ, ಎಂಟು ವರ್ಷದ ವಿರೂಪಾಕ್ಷನ ಬದಲು ವಯಸ್ಕನಾದ

ನನ್ನನ್ನು ಸಿಂಹಾಸನಕ್ಕೇರಿಸಿದಂತೆ, ಈಗಲೂ ನನ್ನ ಕೊನೆಗಾಲದಲ್ಲಿ ನನ್ನ ಎಂಟು ವರ್ಷದ ಮಗ ತಿರುಮಲನ ಬದಲು ಇನ್ನಾರನ್ನೋ ಸಿಂಹಾಸನಕ್ಕೇರಿಸುವ ಹಂಬಲದಿಂದ ತಿರುಮಲನಿಗೆ ವಿಷಪ್ರಯೋಗ ಮಾಡಿಸಿದೀಯೆ........'

'ಯಾವ ಆಧಾರದ ಮೇಲೆ ಈ ಆರೋಪಣೆ?' ಸಾಳುವ ತಿಮ್ಮ ತಟಕ್ಕನೆ ತಲೆಹಾಕಿದನು.

ಸಾಳುವ ತಿಮ್ಮ ಮಾತೇ ಆಡದಿದ್ದಂತೆಯೋ, ಆಡಿಯೂ ತನಗೆ ಕೇಳಿಸದಂತೆಯೋ ರಾಯ ಮುಂದುವರಿಸಿದ 'ಅರಸ ವೀರನರಸಿಂಹನ ಆಜ್ಞೆಯನ್ನು ನೀ ಧಿಕ್ಕರಿಸಿದಾಗ ಅವನು ಮೃತ್ಯುಶಯ್ಯೆಯಲ್ಲಿದ್ದು, ಕೂಡಲೆ ಮರಣಹೊಂದಿದ; ನಿನ್ನ ದ್ರೋಹಕ್ಕೆ ಶಿಕ್ಷೆ ನೀಡಲು ಅವನೇ ಇರಲಿಲ್ಲ; ಅಲ್ಲದೆ ರಾಜಕುವರನ ಕೊಲೆಯೂ ಆಗಲಿಲ್ಲ. ಈಗಲಾದರೋ ನಿನ್ನ ದ್ರೋಹಕ್ಕೆ ಶಿಕ್ಷೆ ನೀಡಲು ನಾ ಜೀವಂತನೂ ಸಮರ್ಥನೂ ಆಗಿದೇನೆ. ರಾಜದ್ರೋಹವೊಂದಲ್ಲದೆ ನಿರಪರಾಧಿ ಬಾಲಕನೊರ್ವನ ಕೊಲೆಯ ಅಪರಾಧ ನಿನ್ನ ತಲೆಯ ಮೇಲೆ ಹೆಣಭಾರವಾಗಿ ಕೂತಿದೆ. ಕಣ್ಣಿಗೆ ಕಣ್ಣು, ಕೈಗೆ ಕೈ, ಜೀವಕ್ಕೆ ಜೀವ;—ಇದು ಸಾಮ್ರಾಜ್ಯದ ಶಿಕ್ಷೆಯ ಸಂಪ್ರದಾಯ. ತಿರುಮಲನ ಕೊಲೆಗಾಗಿ ನ್ಯಾಯಶಾಸನ ನಿನಗೆ, ನಿನ್ನ ಮಗ ದಣ್ಣಾಯಕನಿಗೆ ಮರಣದಂಡನೆ ವಿಧಿಸುವುದು.'

ಆಸ್ಥಾನಿಕರೆಲ್ಲ ಬೆಚ್ಚಿದರು; ಸಾಳುವ ತಿಮ್ಮ, ದಣ್ಣಾಯಕರು ರಾಯನನ್ನು ಅರ್ಥವಿಹೀನವಾಗಿ ದಿಟ್ಟಿಸಿದರು. ಪರಿಸ್ಥಿತಿ ಇಂಥ ವಿಷಮತೆಗೆ ಎಡೆಗೊಡಬಹುದೆಂದು ಯಾರೂ ನಿರೀಕ್ಷಿಸಿರಲಿಲ್ಲ.

ರಾಯ ಮಾತು ಮುಂದುವರಿಸಿದ 'ಬ್ರಾಹ್ಮಣ ವಧಾರ್ಹನಲ್ಲ. ಆದ್ದರಿಂದ ನಿಮ್ಮನ್ನು ಆಜೀವಪರ್ಯಂತ ಸೆರೆಗೆ ಗುರಿಪಡಿಸಿದೇನೆ: ವಿಷದ ಅಭಿಯೋಗದ ಸೂತ್ರಧಾರ ಸಾಳುವ ತಿಮ್ಮ ನೀನು; ನಿನ್ನ ಕೈಗೊಂಬೆಯಾಗಿ ವಿಷಪ್ರಯೋಗ ಮಾಡಿದ ನಿನ್ನ ಮಗ ದಣ್ಣಾಯಕ; ಈ ಶಿಕ್ಷೆಗಾಗಿ ಗೊಂದಲ ಹೂಡಬಹುದಾದ ನಿನ್ನ ಎರಡನೆಯ ಮಗ ಗೋವಿಂದ, ಹಾಗು ನಿನ್ನ ಈ ಬಂಧುಗಳು ಇವರೆಲ್ಲರೂ ಸೆರೆಮನೆಗೆ!'

ದಂಡಾಧಿಕಾರಿ ಭಟಗಣ ಸಮೇತನಾಗಿ ಸಭೆಯ ಒಳವಂದು ಈ ಎಲ್ಲರನ್ನೂ ಸೆರೆಮನೆಗೊಯ್ದನು.

ಸಾಳುವ ತಿಮ್ಮ ಸಾಮಾನ್ಯ ಪ್ರಭೃತಿಯಲ್ಲ. ಅವನ ಬಂಧು ಬಳಗದವರೂ, ಹಿತೈಷಿಗಳೂ, ಅವನಿಂದ ಉಪಕೃತರಾದವರೂ ಸಾಮ್ರಾಜ್ಯದಲ್ಲಿ ಎಲ್ಲೆಲ್ಲೂ ಇದ್ದರು. ಸಾಮ್ರಾಜ್ಯದ ಆಧಾರಸ್ತಂಭ ಸಾಳುವ ತಿಮ್ಮ ಇಂಥ ಹೊಲ್ಲ ಆಪಾದನೆಗೆ ಗುರಿಯಾಗಿ ಸೆರೆಮನೆ ಸೇರಿದನೆಂಬುದು ವಿಶೇಷ ವಿಕ್ಷೋಭೆಗೆ ಕಾರಣ. ವೀರನರಸಿಂಹನ ಕಾಲದಿಂದಲೂ ಸಾಮ್ರಾಜ್ಯದ ಸರ್ವಸೂತ್ರಧಾರಿಯಾಗಿ, ಕೃಷ್ಣದೇವರಾಯ ಸಿಂಹಾಸನವೇರಲು ಕಾರಣನಾಗಿ, ರಾಯನಿಂದಲೂ ತಂದೆಯಂತೆ ಗೌರವಿತನಾಗಿ 'ಅಪ್ಪಾಜಿ'ಯೆಂದು ಕರೆಯಲ್ಪಟ್ಟು, ಮಹಾಮಂತ್ರಿಯಾಗಿ, ಹಲವಾರು ದಂಡಯಾತ್ರೆಗಳಲ್ಲಿ ವಿಜಯನಗರದ ದಂಡನಾಯಕನಾಗಿ ಇದ್ದ ಸಾಳುವ ತಿಮ್ಮ ಹಿರಿಯದೊಂದು ಅಶ್ವತ್ಥವೃಕ್ಷ ನೆಲದಲ್ಲಿ ಬಹು ದೂರದವರೆಗೂ ಆಳದವರೆಗೂ ಬೇರುಬಿಟ್ಟು ಇದ್ದಂತೆ ವಿಜಯಸಾಮ್ರಾಜ್ಯದಲ್ಲಿ ಪ್ರಭಾವಶಾಲಿಯಾಗಿದ್ದನು. ಇಂಥವನ ಬಂಧನದಿಂದ ಜನದಲ್ಲಿ ಕೋಲಾಹಲವುಂಟಾಗುವುದು ಹೆಚ್ಚಲ್ಲ. ಬರಿ ಮಾತನಾಡಿ ಸುಮ್ಮನಾಗುವ ಜನವೇ ಹೆಚ್ಚಾದರೂ ಸಾಳುವ ತಿಮ್ಮನ ಸಮೀಪ ಬಂಧುಗಳೂ, ಅಭಿಮಾನಿಗಳೂ ಆದ ದಳಪತಿಗಳು ಕಾರ್ಯಾಚರಣೆಗೆ ಸಿದ್ಧರಾದರು. ಈ ದಳಪತಿಗಳು ರಾಯನಿಗೆ ವಿರೋಧಿಗಳಲ್ಲದಿದ್ದರೂ ಸಾಳುವ ತಿಮ್ಮನಿಗೋಸುಗ ವಿದ್ರೋಹಿಗಳಾಗಲು ಹಿಂದೆಗೆಯಲಿಲ್ಲ.

ಸರಿ ರಾತ್ರಿಯ ಸಮಯ. ತುರಂಗದ್ವಾರದಲ್ಲಿ ಚಿಕ್ಕದೊಂದು ಪಡೆ ಬಂದು ನಿಂತಿತು. ಪಡೆವಳ ಪಹರೆಯವನಿಗೆಂದ:

'ಪ್ರಭುಗಳ ಆಜ್ಞೆಯಾಗಿದೆ,—ಸಾಳುವ ತಿಮ್ಮನನ್ನು ಬಂಧನದಿಂದ ಬಿಟ್ಟುಕೊಡು.'

ಪಹರೆಯವರಲ್ಲಿ ಒಬ್ಬ ದ್ವಾರದಿಂದ ನಿರ್ಗಮಿಸಿ, ತುರಂಗದ ಮುಖ್ಯಾಧಿಕಾರಿಯನ್ನು ಕರೆತಂದ. ಪಡೆವಳ ಮುಖ್ಯಾಧಿಕಾರಿಯೆದುರು ಪುನರುಚ್ಚರಿಸಿದ:

'ಪ್ರಭುಗಳ ಆಜ್ಞೆಯಾಗಿದೆ,—ಸಾಳುವ ತಿಮ್ಮನನ್ನು ಬಂಧನದಿಂದ ಬಿಟ್ಟುಕೊಡು.'

ಮುಖ್ಯಾಧಿಕಾರಿಗೆ ಅಚ್ಚರಿ; ಇಂಥ ಅವೇಳೆಯಲ್ಲಿ ಬಿಡುಗಡೆಯೆ? ಅದೂ ಮಹಾಪರಾಧಕ್ಕಾಗಿ ಶಿಕ್ಷಿತನಾದ ಸಾಳುವ ತಿಮ್ಮರಸಿಗೆ. ಆದರೆ ತನ್ನ ಕರ್ತವ್ಯವನ್ನು ತಾನು ನಿರ್ವಹಿಸಬೇಕು. ತನ್ನ ಮನಸದ ಹೊಯ್ದಾಟವನ್ನು ತೋರಗೊಡದೆ, ಪ್ರಶ್ನಿಸಿದ:

'ರಾಯಸವೆಲ್ಲಿ?'

ಪಡೆವಳ ಕಂಗಾಲಾದ, ಇಂಥ ಪ್ರಶ್ನೆ ಎದ್ದೀತೆಂದು ಎಣಿಸಿರಲಿಲ್ಲವೋ; ತನ್ನ ಪಡೆವಳತನದ ಸಮವಸ್ತ್ರವನ್ನು ನೋಡಿದೊಡನೆಯೆ ತನ್ನ ಮಾತು ನಡೆಸಲ್ಪಡುವುದೆಂದು ಭಾವಿಸಿದ್ದನೋ. ತನ್ನ ಸೊಂಟದಲ್ಲಿ ತಡುಕಿದಂತೆ ನಟಿಸಿದ.

'ಓಹ್! ಎಲ್ಲೋ ಬಿದ್ದುಹೋಗಿದೆ. ಕತ್ತಲಲ್ಲಿ ಬಿದ್ದುದು ಕಾಣದಾಯ್ತು.'

ತುರಂಗದ ಅಧಿಕಾರಿ ಕರ್ತವ್ಯಪರ. 'ರಾಯಸವನ್ನು ತಂದುಕೊಟ್ಟೊಡನೆಯೇ ತಡವಿಲ್ಲದೆ ಬಿಡುಗಡೆ ಮಾಡಲಾಗುವುದು.'

'ಉಂಟೆ, ಉಂಟೆ! ಈ ಕೂಡಲೆ ಸಾಳುವ ತಿಮ್ಮರಸನ್ನು ತುರಂಗದಿಂದ ಹೊರಗೊಯ್ದು ದೂರದ ಚಂದ್ರಗಿರಿ ಕೋಟೆಯಲ್ಲಿ ಬಂಧಿಸಿಡಬೇಕೆಂದು ರಾಜಾಜ್ಞೆಯಾಗಿದೆ. ಹಗಲುಹೊತ್ತಾದರೆ ಮಂತ್ರಿಯನ್ನು ಕಂಡು ಜನ ಉದ್ರೇಕಗೊಂಡಾರು; ಅದಕ್ಕಾಗಿಯೇ, ಜನ ಕಾಣದಂತೆ ಕತ್ತಲ ಹೊತ್ತಿನಲ್ಲೆ ಸಾಗಿಸಬೇಕೆಂದು ರಾಜಾಜ್ಞೆ.'

'ರಾಜಾಜ್ಞೆಯ ಅಂಕಿತವನ್ನು ನೋಡದೆ ಬಿಡುಗಡೆ ಮಾಡಲಾಗದು.'

'ರಾಯಸವನ್ನು ಕಳೆದುಕೊಂಡ ತಪ್ಪಿಗೆ ನನ್ನ ಸ್ಥಾನ, ತಲೆ ಹೋಗಬೇಕೇನು?'

'ನಾ ಕರ್ತವ್ಯವಿಮುಖನಾಗಲಾರೆ.'

ಪಡೆವಳನ ಬಾಯಿಂದ ತಟಕ್ಕನೆ ಸಿಳ್ಳುಮೂಡಿತು. ಅವನ ಸಂಗಡಿಗರೆಲ್ಲ ಚಳಕ್ಕನೆ ಕೈದುಗಳನ್ನು ತುಡುಕಿ ಪಹರೆಯವರ ಮೇಲೆ ಬಿದ್ದರು.

ಖಣಿಲ್ ಖಣಿಲ್....ಖಣಿಲ್ ! ಖಣಿಲ್.... !

ಮಸೆವೆತ್ತ ಕೂರ್ಗತ್ತಿಗಳು ಕತ್ತಲಲ್ಲಿ ಥಳಥಳ ಮಿಂಚಿದವು. ತುರಂಗರಕ್ಷಕರೆಲ್ಲ ದ್ವಾರದೆಡೆಸಿಂತು ಆಕ್ರಮಣಕಾರರನ್ನು ಪ್ರತಿಭಟಿಸಿದ್ದರು. ಪಹರೆಯವರಲ್ಲೊಬ್ಬ ಕುದುರೆಯೇರಿ, ಅರಮನೆಗೆ ಸುದ್ದಿ ಮುಟ್ಟಿಸಿದ. ರಾಯನ ಆಣತಿಯಂತೆ ಅಂಗರಕ್ಷಕಪಡೆ ತುರಂಗದೆಡೆ ಧಾವಿಸಿತು. ಈ ವೇಳೆಗಾಗಲೆ ತುರಂಗರಕ್ಷಕರಲ್ಲಿ ಹೆಚ್ಚುಮಂದಿಯೆಲ್ಲ ನೆಲಕ್ಕೊರಗಿದ್ದರು ; ಆಕ್ರಮಣಕಾರರು ತುರಂಗದ ಒಳನುಗ್ಗಿ ಸಾಳುವ ತಿಮ್ಮ, ದಣ್ಣಾಯಕರಿಗಾಗಿ ಹುಡುಕುತ್ತಿದ್ದರು. ಇಷ್ಟರಲ್ಲೇ ಅರಸನ ಅಂಗರಕ್ಷಕಪಡೆ ಧಾವಿಸಿ, ಆಕ್ರಮಣಕಾರರ ಪ್ರಯತ್ನವನ್ನು ನಿಷ್ಫಲಗೊಳಿಸಿತು. ಆಕ್ರಮಣಕಾರರಲ್ಲಿ ಸತ್ತುಳಿದವರು ಬಂಧಿತರು.

ದಳಪತಿಗಳ ವಿದ್ರೋಹ ಹಬ್ಬುವ ಸೂಚನೆ ಕಂಡುಬಂದಿತು. ರಾಯನಿಗೆ ತನ್ನ ಇತರ ದಳಪತಿಗಳನ್ನು ನಂಬಲೂ ಸಂಕೋಚ. ಮುಡಿಪಾಗಿಟ್ಟಿದ್ದ ಸ್ವಂತದ ಪೋರ್ಚುಗೀಸ್ ಪಡೆಯನ್ನು ಅರಮನೆಗೂ, ನೆರೆಮನೆಗೂ ಕಾವಲಿಟ್ಟನು. ಸತ್ತುಳಿದ ವಿದ್ರೋಹಿ ದಳಪತಿಗಳನ್ನೂ, ಅವರ ವಿಶ್ವಾಸಿಗರನ್ನೂ ದೂರದ ಚಂದ್ರಗಿರಿ ದುರ್ಗದಲ್ಲಿ ಬಂಧನವಿರಿಸಿದನು. ದಳಪತಿಗಳ ದಂಗೆ ಅಡಗಿತು.

ಬಾಲರಾಜ ತಿರುಮಲದೇವನ ವಿಚಿತ್ರ ಮರಣ ; ಮಹಾಮಂತ್ರಿ ಸಾಳುವ ತಿಮ್ಮನ ಬಂಧನ ; ಅವನ ಬಿಡುಗಡೆಗಾಗಿ ದಳಪತಿಗಳ ದಂಗೆ ; ಈ ಸುದ್ದಿಗಳು ಬಣ್ಣಬಣ್ಣವಾಗಿ ಸಾಮ್ರಾಜ್ಯದಲ್ಲೆಲ್ಲ ಹರಡಿದವು.

ಸಾಳುವ ತಿಮ್ಮನಿಂದ ಆಗಿದ್ದ ಸಾಮ್ರಾಜ್ಯಸೇವೆಯನ್ನೂ ಅವನ ವಾರ್ಧಿಕ್ಯವನ್ನೂ ಜನಪ್ರಿಯತೆಯನ್ನೂ ಪರಿಗಣಿಸಿ

ರಾಯ ಅವನನ್ನು ಸೆರೆಯಿಂದ ಹೊರತರಿಸಿ, ಬೇರೊಂದು ಸುವ್ಯವಸ್ಥಿತ ಸದನದಲ್ಲಿ ಕಾವಲಿನಲ್ಲಿ ಇಟ್ಟನು. ಸಾಳುವ ತಿಮ್ಮನಿಗೆ ಸರ್ವ ಸುಖಸೌಲಭ್ಯಗಳೂ ಒದಗಿಸಲ್ಪಟ್ಟಿದ್ದವು; ಆದರೆ ಹೊರಬರ ಭೇಟಿಗೆ ಅವಕಾಶವಿಲ್ಲ; ಪತ್ರವ್ಯವಹಾರಕ್ಕೂ ಎಡೆಯಿಲ್ಲ. ಕಾವಲಿನ ಮೇಲ್ವಿಚಾರಕರಾಗಿ ಪೋರ್ಚುಗೀಸರು ನೇಮಕವಾಗಿದ್ದರು. ಅದೇ ಕಾವಲುಗಾರರಿದ್ದಲ್ಲಿ ಚತುರ ಸಾಳುವ ತಿಮ್ಮ ಅವರ ಮನವೊಲಿಸಿ ತನ್ನ ಕಡೆ ಸೆಳೆದುಕೊಂಡು ಮತ್ತೇನಾದರೂ ವಿದ್ರೋಹವಮಾಡಿಯಾನೆಂದು ರಾಯ ಆಗಾಗ ಕಾವಲುಗಾರರನ್ನು ಬದಲಿಸುತ್ತಿದ್ದನು.

ದಣ್ಣಾಯಕ, ಗೋವಿಂದ, ವಿದ್ರೋಹಿ ದಳಪತಿಗಳು ಎಂದಿನಂತೆ ತುರಂಗದಲ್ಲಿ. ಅವರೆಲ್ಲರೂ ಪ್ರತ್ಯೇಕವಾಗಿ, ಪರಸ್ಪರ ಸಂಸರ್ಗವಿಲ್ಲದಂತೆ ಒಂಟೊಂಟಿಯಾಗಿ ಇಡಲ್ಪಟ್ಟಿದ್ದರು. ಇವರೆಲ್ಲರ ಬಿಡುಗಡೆಗಾಗಿ ಹೊರಗಿದ್ದ ಹಿತಚಿಂತಕರು ರಾಯನಲ್ಲಿ ವಿಧವಿಧವಾಗಿ ಮೊರೆಯಿಟ್ಟರು, ಎಲ್ಲ ವ್ಯರ್ಥ. ದಿನಗಳೆದಂತೆ ಜನ ಸಾಳುವ ತಿಮ್ಮನನ್ನು ಹೆಚ್ಚು ಹೆಚ್ಚು ಮರೆಯುತ್ತ ಬಂದರು. ಬಂಧನಗಳಾಗಿ ಮೂರು ವರ್ಷ ಉರುಳಿದವು.

ದಣ್ಣಾಯಕ ನಡುಹರೆಯದ ವೀರ; ತಂದೆಯಂತೆ ಸ್ಫುರದ್ರೂಪಿ, ಸಮರ್ಥ, ಚತುರ. ಬಂಧನದಲ್ಲಿ ಬೋನಿನಲ್ಲಿ ಕೂಡಿದ ಸಿಂಹದಂತೆ ಬಹು ಕಷ್ಟದಿಂದ, ಮನೋವ್ಯಥೆಯಿಂದ ಕಾಲ ಕಳೆಯುತ್ತಿದ್ದನು. ತುರಂಗದ ಥಂಡಿಯ ಸಣ್ಣ ಕೊಠಡಿಯಲ್ಲಿ ಆ ಗೋಡೆಯಿಂದ ಈ ಗೋಡೆಗೆ ಬಿಡುವಿಲ್ಲದೆ ಹೆಜ್ಜೆ ಹಾಕಿಹಾಕಿ, ಬೇಸತ್ತು, ಸೋತು ಒರಗುತ್ತಿದ್ದನು. ಎಷ್ಟೋ ಬಾರಿ ಕೊಂಚವೂ ಉಣ್ಣದೆ ಒಣಗಿದುದುಂಟು. ಪಹರೆಯವನು ತಟ್ಟೆ ಬಟ್ಟಲುಗಳನ್ನು ವಾಪಸು ಒಯ್ಯಲು ಬಂದಾಗ, ಉಣಿಸು ಇನ್ನೂ ಹಾಗೇ ಇರುವುದನ್ನು ಕಂಡು, ಅನಂತರ ತಿನ್ನುವನೇನೋ, ಎಂದು ಹಾಗೇ ಬಿಟ್ಟುಹೋಗುತ್ತಿದ್ದನು; ಇನ್ನೊಮ್ಮೆ ಬಂದಾಗಲೂ ತಟ್ಟೆ ಮೊದಲ ರೀತಿಯೇ ತುಂಬಿ ಇರುವುದು; ಒಯ್ದುಬಿಡುತ್ತಿದ್ದ. ಈಗೆಲ್ಲ ತಟ್ಟೆ ತೆಗೆಯಲು ಬಂದಾಗ ಉಂಡು ಆಗಿದ್ದರೂ ಸರಿ, ಇಲ್ಲದಿದ್ದರೂ ಸರಿ ಒಯ್ದುಬಿಡುವ; ಅವನಿಗೆ ಗೊತ್ತು ಹಸಿವಿನ

ವೇಳೆಗೇ ತಿನ್ನದಿದ್ದರೆ ಆಮೇಲೆ ಹೇಗೂ ತಿನ್ನುವುದಿಲ್ಲವೆಂದು. ಜನಪ್ರಿಯನಾಗಿದ್ದ, ಸಾಮ್ರಾಜ್ಯದ ಸರ್ವಶ್ರೇಷ್ಠ ಅಧಿಕಾರಿಯಾಗಿದ್ದ ಸಾಳುವ ತಿಮ್ಮನ ಮಗನೆಂದರೆ ಪಹರೆಯವನಿಗೆ ತುಸುವಾದರೂ ಗೌರವ, ಆದರ ಇಲ್ಲದೆಹೋಗದು ; ಸಾಲದೆ ದಣ್ಣಾಯಕನೂ ಒಬ್ಬ ಪ್ರಾಂತಾಧಿಕಾರಿ. ಪಹರೆಯವ ದಣ್ಣಾಯಕನನ್ನು ಮೊದಮೊದಲು ಮಾತನಾಡಿಸಲು ಎಷ್ಟೆಷ್ಟು ಪ್ರಯತ್ನಿಸಿದರೂ ಅವನೇನೂ ಬಾಯ್ ಬಿಡುವವನಲ್ಲ ; ಏನಾದರೂ ಮಾತಿಗೆ ತೊಡಗಿದರೆ ಮೊಗದಿರುಹುವನು. ಪಹರೆಯವ ಮಾತನಾಡುವ ಗೋಜನ್ನೇ ಬಿಟ್ಟು ಬಿಟ್ಟ.

ಇದ್ದಕ್ಕಿದ್ದಂತೆ ದಣ್ಣಾಯಕನ ವರ್ತನೆಯೇ ಬದಲಾಯ್ತು. ಆಹಾರ ತಿಂದರೆ ತಿಂದ, ಇಲ್ಲದಿದ್ದರೆ ಇಲ್ಲ, ಎನ್ನುವ ಹಾಗೆ ಇದ್ದವನು ಸರಿಯಾಗಿ ಆಹಾರ ತೆಗೆದುಕೊಳ್ಳತೊಡಗಿದ ; ಆಹಾರ ಕಡಿಮೆಯಾಗಿ ತೀರ ಬಡಕಲುಗೊಂಡಿದ್ದ ಮೈ ತುಸು ತುಂಬಿಕೊಂಡಿತು. ಪಹರೆಯವನು ಮಾತಾಡಿದರೂ ಉತ್ತರ ಕೊಡದವನು ತಾನೇ ಮಾತು ತೆಗೆಯತೊಡಗಿದ. ಪಹರೆಯವನಿಗೆ ಅಚ್ಚರಿ ; ನಂತರ, ಬಂದಿಗಳೆಲ್ಲ ಇದೇ ರೀತಿ, ಎಂದು ನೆನೆದು ಸುಮ್ಮನಾದ ; ಸೆರೆಮನೆ ಸೇರಿದ ಹೊಸದರಲ್ಲಿ ಕೊರಗಿ, ಕೊರಗಿ ವಿಚಿತ್ರ ವರ್ತನೆ; ಸೆರೆಯು ಮರೆ ರೂಢಿಗೊಂಡಮೇಲೆ ಸಹಜ ಸ್ವಭಾವದಂತೆ ವರ್ತನೆ ಎಂದು ಭಾವಿಸಿದ. ಆದರೆ ದಣ್ಣಾಯಕನ ವರ್ತನೆಯ ಪರಿವರ್ತನೆಗೆ ಕಾರಣ ಬೇರೆ.

'ಓಬ. ಸದಾ ಇಲ್ಲೇ ಕೂತಿರುವೆಯಲ್ಲ. ಅಪರಾಧಿಯಾದ ನನಗೆ ಬಂಧನವಾದರೆ ಕಾವಲಿನ ನಿನಗೂ ಬಂಧನವೆ?'

'ಏನು ಮಾಡುವುದು, ಒಡೆಯರೆ. ಹೊಟ್ಟೇಪಾಡು ನೀಗಬೇಕಲ್ಲ'.

'ಓಬ. ನಿನಗೆ ಮನೆಯಿಲ್ಲವೆ ? ಮಡದಿ ಮಕ್ಕಳಿಲ್ಲವೆ ? ನಿನಗೂ ಸೆರೆಮನೆಯೇ ನಿವಾಸವಾದರೆ ಮನೆ ಮಡದಿ ಮಕ್ಕಳೇಕೆ ? '

‘ ಏನು ಮಾಡುವುದು, ಒಡೆಯರೆ. ಊಟದ ವೇಳೆಗೆ ಮನೆಗೆ ಹೋಗಿ ಬರುವುದು ; ಎಂದಾದರೂ ರಾತ್ರಿ ಬಿಡುವು ತೆಗೆದುಕೊಂಡು ಮನೆಯಲ್ಲಿ ಮಲಗುವುದು ’.

‘ ಓಬ. ತುಂಬ ಕಠಿಣ ಜೀವನವಲ್ಲವೇ! ’

‘ ಏನು ಮಾಡುವುದು ಒಡೆಯರೆ. ಹೊಟ್ಟೆಯಪಾಡು ನೀಗಬೇಕಲ್ಲ ’.

‘ ಕೃಷ್ಣದೇವರಾಯರ ಆಡಳಿತದಲ್ಲಿ ಜನಕ್ಕೆಲ್ಲ ಬಹಳ ಕಷ್ಟ ’.

ಓಬ ಇಂಥ ಮಾತನ್ನು ಎಂದೂ ಕೇಳಿರಲಿಲ್ಲ ; ಸುಮ್ಮನೆ ‘ ಹೂ, ಹೂ, ’ ಎಂದ.

ಇನ್ನೊಂದು ಮಧ್ಯಾಹ್ನ ಓಬ ಎಲೆ ಜಗಿಯುತ್ತ ದಣ್ಣಾಯಕನ ಸಲಾಕಿ ಬಾಗಿಲನ್ನೊರಗಿ ಕೂತಿದ್ದ.

‘ ಓಬಣ್ಣ ’.

‘ ಓ, ಒಡೆಯ ’ ದನಿಯಲ್ಲಿ ಹಿಗ್ಗಿತ್ತು, ಎಂದೂ ‘ ಓಬ ’ ಎಂದು ಕರೆಯುತ್ತಿದ್ದವನು ಇಂದು ‘ ಓಬಣ್ಣ ’ ಎಂದು ಕರೆದುದಕ್ಕೆ.

‘ ಅಷ್ಟೊಂದು ವಯಸ್ಸಾದ, ಅಷ್ಟೊಂದು ತಿಳುವಳಿಕೆಯುಳ್ಳ ದೊಡ್ಡ ರಾಜರ ಕಾಲದಲ್ಲೇ ನಿಮ್ಮ ಸ್ಥಿತಿ ಹೀಗಿದ್ದರೆ ಏನೂ ತಿಳಿಯದ, ಎಳೆ ವಯಸ್ಸಿನ ಚಿಕ್ಕರಾಜನ ಆಳಿಕೆಯಲ್ಲಿ ನಿಮ್ಮಂಥವರ ಸ್ಥಿತಿ ಹೇಗಿರಬೇಡ ’.

‘ ಅಲ್ಲವೆ, ಒಡೆಯ ’.

‘ ಚಿಕ್ಕರಾಜ ಏನೋ ಕಾಯಿಲೆ ಬಂದು ಸತ್ತರೆ, ಅದಕ್ಕೆ ನಮ್ಮ ಮೇಲೆ ತಪ್ಪು ಹೊರಿಸಿ, ಸೆರೆಗೆ ದೂಡಬೇಕೆ! ಚಿಕ್ಕರಾಜ ಸತ್ತರೆ ನಮಗೇನು ಲಾಭ ’.

‘ ತಮಗೇನು ಬೇಕಾಗಿದೆ ’.

‘ ನಾವು ಹಾಗೆಲ್ಲ ವಿಷಹಾಕಲು ಹೋದೇವೇ ? ’

‘ ಹೇಳಿದರೂ ನಂಬುವರಾರು, ಒಡೆಯ. ಮಗ ಹೋದ ದುಃಖದಲ್ಲಿ ರಾಜರು ಏನೇನೋ ಮಾಡಿಬಿಟ್ಟರು’.

‘ ಅವರ ಒಂದು ಕ್ಷಣದ ದುಃಖಕ್ಕೆ ನಾವು ಬದುಕೆಲ್ಲ ಸೆರೆಮನೆಯಲ್ಲಿ ಕೊಳೆಯಬೇಕೆ ? ’

‘ ನಿಮ್ಮನ್ನು ನೋಡಿದರೆ ನನಗೇ ವ್ಯಸನವಾಗುತ್ತದೆ. ನಿಮಗೆ ಯಾವಾಗ ಬಿಡುಗಡೆಯಾದೀತೋ, ಎನಿಸುತ್ತದೆ’.

‘ ಓಬಣ್ಣ, ನೀನು ಬಹಳ ಒಳ್ಳೆಯವ. ನಾ ಬಿಡುಗಡೆಯಾದರ ನಿನಗೆ ಕೈತುಂಬ ಸಂಬಳ ಬರುವ ದೊಡ್ಡ ಅಧಿಕಾರವನ್ನೇ ಕೊಡಿಸುತ್ತೇನೆ ’.

‘ ನಿಮಗೆ ಬಿಡುಗಡೆ ಯಾವಾಗ ಆದೀತು, ಒಡೆಯ ? ’

‘ ನೀನು ಬಿಟ್ಟಾಗ. ಬಾಗಿಲ ಕೀಲಿ ನಿನ್ನ ಕೈಲೇ ಇದೆ ’.

ಓಬ ಬೆಚ್ಚಿದ ; ತಟಕ್ಕನೆ ಎದ್ದು ಹೋದ.

ಬಂದಿ ದಣ್ಣಾಯಕನೊಂದಿಗೆ ಕಾವಲಿನ ಓಬ ತುಂಬ ಮಾತುಕತೆಯಾಡುತ್ತ ನಿಲ್ಲುವುದನ್ನು ನೋಡಿ, ಸೆರೆಮನೆಯ ಅಧಿಕಾರಿ ಓಬನನ್ನು ಬೇರೆಡೆಗೆ ವರ್ಗಾಯಿಸಿದನು. ದಣ್ಣಾಯಕನಿಗೆ ಈಗ ಹೊಸ ಕಾವಲು. ಓಬ ಹೆಡ್ಡನೆಂದು ಬುದ್ಧಿವಂತ ನಿಂಗ ಈಗ ನೇಮಕ. ಬುದ್ಧಿಯನ್ನು ದುರ್ಮಾರ್ಗದಲ್ಲಿ ಉಪಯೋಗಿಸಿದರೆ ಕೆಡಕು ಹೆಚ್ಚು. ನಿಂಗ ಮೊದಮೊದಲು ಬಹು ಬಿಗಿಯಾಗಿದ್ದರೂ ಕೊನೆಗೆ ದಣ್ಣಾಯಕ ಹಚ್ಚಿದ ಆಸೆಗಳಿಗೆ ಕಿವಿಜೋತ. ಚತುರನಾಗಿದ್ದು ಬೇಕಾದ ಸನ್ನಾಹಗಳನ್ನು ಸಂಶಯಕ್ಕೆ ಆಸ್ಪದವಿಲ್ಲದಂತೆ ಹವಣಿಸಿದ.

ಅಮವಾಸ್ಯೆಯ ನಡುರಾತ್ರಿ. ದಣ್ಣಾಯಕನ ಸೆರೆಯ ಬಾಗಿಲ ಬೀಗ ತೆರೆಯಿತು. ನಿಂಗ ಮತ್ತೆ ಅತ್ತಿತ್ತ ತಿರುಗಿ ನೋಡಿ, ಯಾರೂ ಇಲ್ಲದುದನ್ನು ದೃಢಪಡಿಸಿಕೊಂಡು, ಬಾಗಿಲು ತೆರೆದನು. ನಿಂಗನಿತ್ತ ಕರಿಯುಡುಪು

ತೊಟ್ಟು ಸಿದ್ಧನಾಗಿದ್ದ ದಣ್ಣಾಯಕ ಮೆಲ್ಲನೆ ಹೊರ ಬಂದು ನಿಂತ. ನಿಂಗ ತುರಂಗದ ಪೌಳಿಯ ಬಳಿ ನಿಂತು ಹೊರ ಪಹರೆಯವರಿಬ್ಬರೂ ಆ ಎಡಗೆ ದೂರವಿರುವುದನ್ನು ಕಂಡುಕೊಂಡು, ಗೋಡೆಗೆ ಆತು ನಿಂತು ಚಿಟಿಕೆ ಹೊಡೆದನು. ಗೋಡೆಯ ಹೊರ ಬದಿಯಿಂದಲೂ ಚಿಟಿಕೆ ಕೇಳಿಸಿತು. ಗೋಡೆಯ ಮೇಲೆ ಹಾದು ನೂಲೇಣಿ ನಿಂಗನ ತಲೆಯ ಮೇಲೆ ತಾಕಿತು. ನಿಂಗ ಹಿಡಿದು ಜಗ್ಗಿದ; ಹೊರಗಡೆ ಭದ್ರವಾಗಿ ಕಟ್ಟಿತ್ತು; ನಿಂಗ ದಣ್ಣಾಯಕನ ಕೈ ಹಿಡಿದೆಳೆದು ನೂಲೇಣಿಯನ್ನು ತಾಕಿಸಿದನು. ದಣ್ಣಾಯಕ ನೂಲೇಣಿಯನ್ನು ಸರಸರನೆ ಹತ್ತಿ, ಗೋಡೆಯ ಮೇಲಂಚಿನಲ್ಲಿ ಕುಳಿತುದು ನಿಂಗನಿಗೆ ಕಂಡಿತು; ಇನ್ನೇನು ಅವನ ಆಕೃತಿ ಮರೆಯಾದರೆ ಗೆದ್ದಂತೆ; ಅವನಾಕೃತಿ ಕೆಳಗೆ ಜಾರಿದುದು ಗೋಚರ. ನಿಂಗ ಚಕಚಕನೆ ಮೇಲೆ ಹತ್ತಿದನು. ಗೋಡೆಯ ಮೇಲಂಚಿನಲ್ಲಿ ಕುಳಿತು ಹೊರಗಡೆ ಕಾಲ್ ಚಾಚಿದನು.

'ಢಂ!'



ತುಪಾಕಿ ಹಾರಿತ್ತು. ಅದೇ ವೇಳೆಗೆ ಸರಿಯಾಗಿ ನಿಂಗನ ಆಕೃತಿ ಕೆಳಗೆ ಜಾರಿತ್ತು. ಹೋ! ತಮ್ಮ ಒಳ ಸಂಚು ಬಯಲಾಯ್ತು. ದಣ್ಣಾಯಕ, ನಿಂಗ, ನಿಂಗನ ತಮ್ಮ ರಂಗ ಮುವ್ವರೂ ನೂಲೇಣಿಯನ್ನು ಅಲ್ಲೇ ಬಿಟ್ಟು ಓಡಿದರು. ಬಳಿಯ ಮರಕ್ಕೆ ಕಟ್ಟಿದ್ದ ಕುದುರೆಗಳನ್ನು ಬಿಚ್ಚಿ, ಮೇಲೆ ಹಾರಿ ಕುಳಿತು, ನಾಲ್ಕಾಲೋಟ ಓಡಿಸಿದರು.

ಢಂ! ಢಂ!.... ಢಂ!.... ಢಂ!........

ಆಧಾ ಕರ್ಣಾಟಕದೇವಿ.

ಗುಂಡು ಕತ್ತಲಲ್ಲಿ ಸಿಕ್ಕಾಪಟ್ಟೆ ಹಾರುತ್ತಿತ್ತು. ಸಿಂಗನ ತಮ್ಮ ರಂಗ ಧೊಸಕ್ಕನೆ ನೆಲಕ್ಕೆ ಕುಸಿತನು ; ಅವನ ಕುದುರೆ ಸವಾರನಿಲ್ಲದೆ ಸಿಕ್ಕಾಪಟ್ಟೆ ಓಡಿತು. ದಣ್ಣಾಯಕ, ಸಿಂಗ ಬಿಟ್ಟ ಬಾಣದಂತೆ ವೇಗವಾಗಿ ಕುದುರೆ ಓಡಿಸಿದರು. ಬೆಂಬದಿಯಲ್ಲೆ ಅಟ್ಟಿಕೊಂಡು ಬರುತ್ತಿದ್ದ ತುರಂಗ ರಕ್ಷಕರ ಹುಯ್ಲು ಕೇಳಿಸಿತು. ರಕ್ಷಕರು ಇನ್ನೂ ಮುಂದೆ ಸಾಗಿದಾಗ ಕುದುರೆಗಳೆರಡು ಸವಾರರಿಲ್ಲದೆ ನಿಂತಿದ್ದುದು ಗೋಚರ. ಅರ್ಧ ರಾತ್ರಿಯ ಕಗ್ಗತ್ತಲಲ್ಲಿ ಅತ್ತಿತ್ತ ಹುಡುಕಾಡಿ ನೋಡಿ, ಅನ್ವೇಷಣೆ ಅರ್ಥವಿಹೀನವಾಗಲು ಸೆರೆಮನೆಗೆ ಹಿಂದಿರುಗಿದರು.

* * * *

ಸಹ್ಯಾದ್ರಿಯ ಸಾಲಿನಲ್ಲಿ ಕಡಿದಾದ ಉನ್ನತ ಪ್ರದೇಶದಲ್ಲಿ ನಿರ್ಮಿತವಾದ ದುರ್ಗಪುರದ ದುರ್ಗವು ದುರ್ಗ. ದುರ್ಗನಾಯಕ ಸಿಂಗನಾಯಕ ದಣ್ಣಾಯಕನ ಮಾವ. ದಣ್ಣಾಯಕ ಬಂಧಿತನಾದಾಗ, ಸಿಂಗನಾಯಕ ಮಗಳು ಮೇಖಲೆಯನ್ನು, ಇಬ್ಬರು ಮೊಮ್ಮಕಳನ್ನೂ ಕರೆತಂದು ದುರ್ಗಪುರದಲ್ಲೇ ಸಲಹುತ್ತಿದ್ದನು. ಸಾಳುವ ತಿಮ್ಮ, ದಣ್ಣಾಯಕರ ಬಿಡುಗಡೆಗಾಗಿ ಸಿಂಗನಾಯಕ ಹಲವು ಪ್ರಮುಖರ ನೆರವಿನಿಂದ ರಾಯನಲ್ಲಿ ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥ. ಮೇಖಲೆ ಕಂಬನಿಯ ಕೋಡಿ ಹರಿಸುವುದರಲ್ಲಿ ಕಾಲ ನೂಕುತ್ತಿದ್ದಳು ; ಭರ್ತನನ್ನಗಲಿ ಮೂರು ವರ್ಷಕ್ಕೆ ಮಿಕ್ಕಿದ್ದಿತು.

ಅಂದು ರಾತ್ರಿ ಬಹು ವೇಳೆಯಾಗಿತ್ತು ; ಶೋಕಾಗ್ನಿದಗ್ಧ ಮೇಖಲೆ ನಿದ್ದೆ ಬಾರದೆ ಸದನದ ಮುಂದಿನ ಉಪವನದ ಆಸನದಲ್ಲಿ ಒರಗಿದ್ದಳು. ಸಿರಿಯ ಮೊಗ್ಗುಗಳ ಸವಿಗಂಪು ಆ ಹೆಣ್ಣನ್ನು ಆಮೋದಗೊಳಿಸಲಿಲ್ಲ ; ತಂಪಾದ ತಿಳಿಗಾಳಿ ಅವಳ ದಗ್ಧ ಹೃದಯಕ್ಕೆ ತಂಪು ನೀಡಲಿಲ್ಲ. ಮುಗಿಲಲ್ಲಿ ತೇಲುತ್ತಿದ್ದ ಶಶಿಯ ತೆಳು ರೇಖೆ ಕಣ್ಗಳಿಗೆ ಹಬ್ಬವಾಗಲಿಲ್ಲ. ಅರ್ಥವಿಹೀನವಾಗಿ ಕತ್ತಲನ್ನು ದಿಟ್ಟಿಸುತ್ತ ಆಸೀನಳಾಗಿದ್ದಳು.

ಕೆಲದ ಬಳ್ಳಿ. ಅಲುಗಾಡಿದ ಸದ್ದಾಯಿತು. ತಿರುಗಿ ನೋಡಿದಳು. ಕರಿಯ ಬಟ್ಟೆಯುಟ್ಟು, ದಟ್ಟವಾಗಿ ತಲೆ ಗೂದಲು, ನೀಳವಾಗಿ ಗಡ್ಡ ಬೆಳೆದು ಕತ್ತಲಲ್ಲಿ ಲೀನವಾಗುವಂತಿದ್ದ ಆಕೃತಿ; ಇಷ್ಟೆಲ್ಲ ಕತ್ತಲ ನಡುವೆ ಮೊಗದ ಬಿಳುಪು ಮಾತ್ರ ಫಳಫಳನೆ ಹೊಳೆಯುತ್ತಿತ್ತು. ಮೇಖಲೆ ಬೆಚ್ಚಿ ಚಿಟ್ಟನೆ ಚೀರಿದಳು.

'ಮೇಖಲೆ!' ಕತ್ತಲ ವ್ಯಕ್ತಿ ಸಸಿಹ ಸರಿಯಿತು.

ಮೇಖಲೆ ಇನ್ನೂ ಬೆದರಿ, ನಡಗುತ್ತ ಎದ್ದು ನಿಂತಳು. 'ಯಾರು?' ದನಿ ಹೊರಮೂಡಿತು.

'ನಾನು.' ಆ ವ್ಯಕ್ತಿ ಮೇಖಲೆಗೆ ತೀರ ಸಮೀಪ ಬಂದಿತ್ತು.

ಮೇಖಲೆ ಬೆದರುಗಂಗಳಿಂದ ಅವನನ್ನು ದುರುದುರು ದಿಟ್ಟಿಸಿದಳು. ಓಡಲು ಕಾಲು ಬಾರವು.

'ನಾನು!....ಗುರುತಾಗಲಿಲ್ಲವೆ?....ದಣ್ಣಾಯಕ!'

ಭೂತವೊಂದನ್ನು ಕಂಡಷ್ಟು ಬೆಚ್ಚಿದಳು; ಕಣ್ಣನ್ನು ನಂಬದಾದಳು; ನಂಬಿ ಹಿಗ್ಗಿದಳು.

ಮೇಖಲೆಯ ಕಿರಲನ್ನು ಕೇಳಿ ಸದನದ ಕಾಪಿನಾಳು ಅರಸುತ್ತ ಈ ವೇಳೆಗೆ ಈ ಎಡೆಗೆ ಬಂದನು. ಸ್ವಾಮಿ ಪುತ್ರಿ! ಹಾಗು, ಅಪರಿಚಿತ ಪುರುಷನೊರ್ವ! ಕಾಪಿನಾಳು ಹಿಂಗಡೆಯಿಂದ ಬಂದವನೆ ತಟಕ್ಕನೆ ಆಗಂತುಕನ ಎರಡೂ ಕೈಗಳನ್ನು ಹಿಂದೆಳೆದು ಬಿಗಿಹಿಡಿದನು.

'ಬಿಟ್ಟು ಹೋಗು, ಬಂಟ' ಮೇಖಲೆ ಎಂದಳು.

ಕಾಪಿನಾಳು ಬಗೆಹರಿಯದೆ, ಆಗಂತುಕನನ್ನು ದಿಟ್ಟಿಸುತ್ತ, ಸ್ವಸ್ಥಾನಕ್ಕೆ ಮರಳಿದನು.

'ಮೇಖಲೆ! ಗುರುತು ಹರಿಯಿತೆ!'

ಅವಳ ಶೋಕಭರಿತವಾಗಿದ್ದ ಕಣ್ಗಳು ಹಿಗ್ಗಿ ಹೂವಾಗಿದ್ದವು.

‘ ಮೂರು ವರ್ಷಗಳ ಅಗಲಿಕೆ; ತುರಂಗದ ಅಸಹ್ಯ ಜೀವನ; ಅಡ್ಡಿಯಿಲ್ಲದೆ ಬೆಳೆದ ಗಡ್ಡ, ಕೂದಲು. ಸಾಕಷ್ಟು ವ್ಯತ್ಯಾಸವಾಗಿರಬೇಕಲ್ಲವೆ!’

‘ ಬಿಡುಗಡೆಯೆ? ’

‘ ಪಲಾಯನ.’

ಮೇಖಲೆ ಬೆಚ್ಚಿದಳು. ಬಳಲಿದ್ದ ಭರ್ತನಿಗೆ ಆಸನ ನಿರ್ದೇಶಮಾಡಿದಳು. ದಣ್ಣಾಯಕ ಆಸೀನನಾಗಿ, ವಿಶ್ರಾಂತಿಯ ನಿಟ್ಟುಸಿರುಗರೆದ.

‘ ನಿಂಗ! ’

ಬಂದ.

‘ ಆ ಕೊನೆಯಲ್ಲಿ ಕುಳ್ಳಿರು. ನಂತರ ಕರೆಯುವೆ.’

ಬಳಲಿ ಬೆಂಡಾಗಿದ್ದ ಸಿಂಗನ ಆಕೃತಿ ಮೆಲ್ಲನೆ ಹೆಜ್ಜೆಹಾಕುತ್ತ ಸಾಗಿ ಕತ್ತಲಲ್ಲಿ ಕರಗಿಹೋಯ್ತು.

ಮೇಖಲೆ ಭರ್ತನ ಪದತಲದಲ್ಲಿ ಮುಂಡಿಸಿದಳು. ‘ ಪಲಾಯನವೆಂದರೆ ವಿಘ್ನ ಇನ್ನೂ ಅಪರಿಹಾರವೆಂದಲ್ಲವೆ? ಅಕ್ಷೇಮವೆಂದಲ್ಲವೆ?’

‘ ನಾನು ಇಲ್ಲವೆ ಕೃಷ್ಣದೇವರಾಯ ಅಳಿಯುವ ತನಕ.’

‘ ಕೃಷ್ಣದೇವರಾಯ? ’ ಕರ್ಣಾಟಕ ಸಾರ್ವಭೌಮನನ್ನು ಯಾರಾದರೂ ಈ ರೀತಿ ಸಂಬೋಧಿಸಿದುದು ಅವಳಿಗೆ ಹೊಸತು.

‘ ಹೌದು. ಸಾವು ಇಲ್ಲವೆ ಸೆರೆ ಆಗುವ ತನಕ? ’

‘ ಈಗ ಪಲಾಯನವಾದುದು ಹೇಗೆ ? ’

ದಣ್ಣಾಯಕ ಹೇಳತೊಡಗಿದನು. ಅವನ ದನಿ ಸೋತಿದ್ದುದು ಧ್ಯಾಸಬಂದಿತು ಮೇಖಲೆಗೆ. ‘ ಓ, ಏಳಿ. ಎಷ್ಟೊಂದು ಬಳಲಿರಬೇಕು ; ಮರೆತೇ ಬಿಟ್ಟಿದ್ದೆನಲ್ಲ. ತುಸು ಉಪಹಾರವಾಗಲಿ ಮೊದಲು, ಏಳಿ. ’

ದಣ್ಣಾಯಕ ಮೆಲ್ಲನೆ ಎದ್ದನು. ‘ ನಿಂಗ ! ’

‘....ಓ ’

....ನಿಂಗ ಬಂದ ; ಮೇಖಲೆ ದಣ್ಣಾಯಕರಿಗೆ ತುಸು ದೂರದಲ್ಲಿ ಹಿಂಬಾಲಿಸಿದ. ಮುವ್ವರೂ ಮನೆಯ ಒಳ ಹೋದರು. ಜೀವಾವಧಿ ತುರಂಗವಾಸಕ್ಕೆ ಗುರಿಯಾಗಿ, ಸತ್ತಂತೆ ಭಾವಿಸಲ್ಪಟ್ಟ ಜಾಮಾತನ ಆಗಮನ ಮನೆಯಲ್ಲಿ ಕೋಲಾಹಲವೆಬ್ಬಿಸದೆ ಇದ್ದೀತೆ ? ಮಲಗಿದ್ದ ಎಲ್ಲರೂ ಎದ್ದರು. ಮೂರು ದೀರ್ಘ ವರ್ಷಗಳ ಏಕಾಕಿ, ಅಸುಖಿ, ಅಸಹನೀಯ ಜೀವನದ ನಂತರ ಸರ್ವಸಮೃದ್ಧ, ಪತ್ನೀಪುತ್ರಬಂಧು ಸಹಿತ ಸನ್ನಿವೇಶ ದಣ್ಣಾಯಕನಿಗೆ ಅತೀವ ಆನಂದ ಕಾರಿ. ಸುಖನಿದ್ರೆಯಲ್ಲಿ ರಾತ್ರೆಯನ್ನು ಕಳೆದನು. ಬೆಳಗು, ಅವನ ಮೈಮನಗಳ ಆಲಸ್ಯ ಹೋಯ್ತು. ಗಡ್ಡ ಹೋಯ್ತು. ಅವನೀಗ ಸೆರೆಮನೆಯಲ್ಲಿ ಕೊರಗಿದ್ದ ಬಂದಿಯಲ್ಲ ; ಮೂರು ವರ್ಷಗಳ ಹಿಂದೆ ವಿಜೃಂಭಿಸಿದ್ದ ದಣ್ಣಾಯಕ.

‘ ಮಾವಯ್ಯ. ಈಗ ಏನು ಮಾಡೋಣ ? ’

‘ ನನ್ನ ಒಬ್ಬಳೇ ಮಗಳನ್ನು ನಿನಗೆ ಧಾರೆಯೆರೆದು ಕೊಟ್ಟಾಗಲೇ ನೀ ನನ್ನ ಮಗಳೂ ಮಗನೂ ಆದೆ. ನೀ ಏನೆಲ್ಲ ಹೇಳುವಿಯೋ ಅದೇ ಮಾಡುವೆ.’

‘ ರಾಜದ್ರೋಹಿ, ಎನಿಸಿಕೊಳ್ಳಬಲ್ಲೆಯೇನು ? ’

‘ ಪುತ್ರಿಜಾಮಾತರ ಹಿತಾಕಾಂಕ್ಷಿ ಎನಿಸಿಕೊಳ್ಳಲು ಹಿಂಜರಿಯಲಾರೆ.’

‘ ಸರ್ವಬಲಸನ್ನದ್ಧ ಕೃಷ್ಣದೇವರಾಯನ ಕ್ರೋಧದೆದುರು ನಿನ್ನ ದುರ್ಗವು ದುರ್ಗ ಮಾತ್ರ ನನಗೆ ರಕ್ಷಣೆಯಿತ್ತೀತು’

‘ ನನ್ನ, ನಿನ್ನ ಹಿತೈಷಿಗಳೆಲ್ಲರೂ ನಮಗೆ ನೆರವಾಗಿ, ರಾಯನ ಬಲ ಮುರಿಯುವ ಹವಣೂ ನಡೆಯಬೇಕು ’

‘ ಇಂದೇ ಓಲೆ ಸಹಿತ ದೂತರನ್ನಟ್ಟು. ಇಲ್ಲಿ:ನನ್ನ ಇರವು ಗುಟ್ಟಾಗಿರಲಿ ’

‘ ವಿಜಯನಗರದ ಬೇಹುಗಾರರು ಗುಟ್ಟು·ರಟ್ಟು ಮಾಡುವ ಅತ್ಯಲ್ಪ ಕಾಲದವರೆಗೆ ’

‘ ನಿನ್ನ ಪಡೆಯನ್ನು ಈಗಲೆ ಬಲಪಡಿಸಿಕೋ ’

‘ ಮುತ್ತುವ ಹತ್ತು ದಂಡಾಳುಗಳಿಗೆ ನನ್ನ ಒಬ್ಬ ಕಟ್ಟಾಳು ಸಾಕು. ದುರ್ಗಪುರದ ದುರ್ಗಮತೆಯೇ ನನಗೆ ಹಿರಿಯ ರಕ್ಷೆ. ದುರ್ಗದ್ವಾರ ಇಂದೇ ಮುಚ್ಚುವುದು. ’

ಪುತ್ರಾವಸಾನದಿಂದ ಶೋಕಾಗ್ನಿದಗ್ಧನಾದ ಕೃಷ್ಣದೇವರಾಯ ಬಂದಿಯ ಪಲಾಯನದಿಂದ ಕ್ರೋಧಾಗ್ನಿ ದಗ್ಧನಾದ. ತುರಂಗದ ಹಲವು ಅಧಿಕಾರಿಗಳಿಗೆ ಎಚ್ಚರಗೇಡಿತನಕ್ಕಾಗಿ ತೀವ್ರ ಶಿಕ್ಷೆ ವಿಧಿಸಲಾಯ್ತು.

‘ ಎಲ್ಲಿ ? ಮುದಿನರಿ ತಿಮ್ಮನೆಲ್ಲಿ ?’ ರಾಯ ಘರ್ಜಿಸಿದ.

ಸಾಳುವ ತಿಮ್ಮನನ್ನು ಹೆಡಮುರಿಗೆ ಕಟ್ಟಿ ರಾಯನೆದುರು ತಂದು ಕೆಡವಲಾಯ್ತು.

‘ ಎಲ್ಲಿ ? ದಣ್ಣಾಯಕನೆಲ್ಲಿ ? ಯಾವ ಕುತಂತ್ರಮಾಡಿ, ಎಲ್ಲಿಗೆ ಕಳುಹಿದೆ ?’

‘ ಮಗ ಬದುಕಿರುವನೋ, ಸತ್ತಿರುವನೋ ತಿಳಿಯದಂಥ ಸೆರೆಗಾವಲು ನನಗೆ, ಕಳೆದ ಮೂರು ವರ್ಷಗಳಿಂದ ’

‘ ನಿನ್ನ ಕಪಟನಾಟಕವನ್ನು ನನ್ನೆದುರೂ ಆಡತೊಡಗಿದರೆ ನಿನ್ನ ನಾಲಿಗೆಯನ್ನು ಸೀಳಿಹಾಕುವೆನು ’ .ಘರ್ಜಿಸಿದ ರಾಯನ ಕೈಯಿ ತಟಕ್ಕನೆ ಕಠಾರಿಯನ್ನು ಹೊರಗೆಳೆಯಿತು.

‘ ನನ್ನ ನಾಲಿಗೆ ಮಾತ್ರವೇನು, ನನ್ನ ಅಂಗಾಂಗಳನ್ನೆಲ್ಲ ಶತಚ್ಛಿದ್ರ ಮಾಡುವ ಅಧಿಕಾರ, ಅವಕಾಶ ವಿಜಯನಗರದ ಪ್ರಭುವಿಗೆ ಇದ್ದೇ ಇದೆ. ಸಾಮ್ರಾಜ್ಯದ ಶ್ರೇಯಸ್ಸಿಗಾಗಿ ಹಗಲಿರುಳು ದುಡಿದು ನಾ ಮಹಾಪರಾಧಿಯಾದೆ. ’

ರಾಯ ತನಗೆ ತಾನೇ ಮಾತನಾಡಿಕೊಂಡಂತೆ ಎಂದನು ‘ ಇನ್ನೆಲ್ಲಿ ಹೋಗಿದ್ದಾನು ದಣ್ಣಾಯಕ. ಮಾವ ಸಿಂಗನಾಯಕನ ಸದನಕ್ಕೆ ! ’

ರಾಯ ಬೇಹುಗಾರರನ್ನಟ್ಟಿದನು. ಶೀಘ್ರದಲ್ಲೇ ಬಂತು ಸುದ್ದಿ, ದುರ್ಗಪುರದಲ್ಲಿ ದಣ್ಣಾಯಕನ ಇರವಿನ ಸುದ್ದಿ. ಅದರ ಹಿಂದೇ ಬಂತು ವಿದ್ರೋಹದ ಸುದ್ದಿ ; ಸಿಂಗನಾಯಕನ ನೆರವಿನಿಂದ ದಣ್ಣಾಯಕ ದುರ್ಗಪುರದ ಸುತ್ತಮುತ್ತಲ ಪ್ರದೇಶಗಳನ್ನು ಆಕ್ರಮಿಸತೊಡಗಿದ್ದನು. ಇಂದು ಕರ್ಣಾಟಕದ ಬಸಿರಲ್ಲೇ ವಿದ್ರೋಹ; ಅಂತರ್ಯುದ್ಧ.

ದಣ್ಣಾಯಕನಿಗೆ ಈ ಪ್ರತಿರೋಧ ಜೀವನಮರಣಗಳ ಪ್ರಶ್ನೆ. ಜೀವಾವಧಿ ತುರಂಗದಲ್ಲಿ ಕೊಳೆಯುವುದಕ್ಕಿಂತ ಸ್ವಾತಂತ್ರ್ಯಪ್ರಾಪ್ತಿಯ ಪ್ರಯತ್ನದಲ್ಲಿ ಅವನಿಗೆ ಜೀವನಾಶವೂ ಹಿತಕರ. ಈಗ ಬಂಧನವಿಮುಖನಾದೆ ; ಸ್ವಾತಂತ್ರ್ಯ ರಕ್ಷಣೆಗಾಗಿ ಜೀವದಾನವೂ ಹೆಚ್ಚಲ್ಲ. ಅಲ್ಲದೆ ಸೆರೆಯ ಮರೆಯಲ್ಲಿದ್ದ ತಂದೆ, ತಮ್ಮ , ಬಳಗದವರು ಇವರನ್ನೆಲ್ಲ ಬಿಡುಗಡೆ ಮಾಡುವುದೂ ತನ್ನ ಕರ್ತವ್ಯ. ಇದಕ್ಕಾಗಿ ಹಲವು ಹಿರಿಯರು ಸಾಮಮಾರ್ಗವನ್ನು ಅನುಸರಿಸಿದ್ದು, ಅದೆಲ್ಲ ನಿಷ್ಫಲ ; ಇನ್ನು ಉಳಿದಿರುವುದು ದಂಡಮಾರ್ಗ. ಸ್ವಬಲಸಂವರ್ಧನೆಗಾಗಿ ದಣ್ಣಾಯಕ ಶತಪ್ರಯತ್ನಗಳಲ್ಲಿ ತೊಡಗಿದ್ದನು. ಈಗಾಗಲೆ ಬಂಧನಕ್ಕೊಳಗಾದ ಸಾಳುವ ತಿಮ್ಮನ ಬಂಧುವರ್ಗವಲ್ಲದೆ ಹೊರಗಡೆಯಿದ್ದ ಹಿತಚಿಂತಕರು ಸಾಳುವ ತಿಮ್ಮನಿಗಾಗಿ ರಾಯನ ದ್ವೇಷಕಟ್ಟಿಕೊಳ್ಳಲು ಸಿದ್ಧರಾಗಿರಲಿಲ್ಲ. ಸಿಂಗನಾಯಕನಾದರೋ ತನ್ನ ಏಕಮಾತ್ರ ಪುತ್ರಿಯ ಹಿತಚಿಂತನೆಯಲ್ಲಿ ದಣ್ಣಾಯಕನಿಗಾಗಿ ಸರ್ವಸ್ವವನ್ನೂ ಧಾರೆಯೆರೆದಿದ್ದನು. ಈ ಬಗೆ ರಾಯನ ಬಹಿರಂಗ ವಿರೋಧವನ್ನು

ಕಟ್ಟಿಕೊಳ್ಳಲು ಇನ್ನಾವ ಅಧಿಕಾರಿಯೂ, ದಳಪತಿಯೂ ಸಿದ್ಧನಿರಲಿಲ್ಲ. ದಣ್ಣಾಯಕನ ಪ್ರಯತ್ನಕ್ಕಾಗಿ ಹಲವರಿಂದ ಅನುತಾಪ ಸೂಚಿತವೇ ವಿನಹ ನೇರವಾದ ನೆರವು ದೊರೆಯಲಿಲ್ಲ.

ದಣ್ಣಾಯಕ ಎದೆಗೆಡಲಿಲ್ಲ. ಕರ್ಣಾಟಕಸಾಮ್ರಾಜ್ಯದ ಭಟಗಣದ ಕೈತಪ್ಪಿಸಿಕೊಂಡು ಮುಖಮರೆಸಿಕೊಂಡಿದ್ದ ಕಳ್ಳಕಾಕರು ದರೋಡೆಕಾರರಿಗೆ ಈ ಗಿರಿರಾಜಿ ಆವಾಸ. ದಣ್ಣಾಯಕ ಇವರಿಗೆಲ್ಲ ಹೆಚ್ಚಿನ ಸಂಭಾವನೆಯ ಆಸೆದೋರಿ ಸೇನೆ ಸೇರಿಸಿದನು ; ಹೀಗೆ ದುರ್ಗಪುರದ ದಂಡಾಳುಗಳಲ್ಲದೆ, ಕಳ್ಳ ದರೋಡೆಕಾರರ ಪಡೆಯೂ ಸೇರಿತು. ದುರ್ಗಪುರದ ಸುತ್ತಮುತ್ತಲ ಸೀಮೆಯಲ್ಲಿ ಕೊಳ್ಳೆಕೊಲೆಗಳ ಉಗ್ರಉಪಟಳ, ತರುಣರನ್ನೆಲ್ಲ ಬಲಾತ್ಕಾರದಿಂದ ಎಳೆತಂದು ಸೈನ್ಯಕ್ಕೆ ಸೇರಿಸಿಕೊಳ್ಳುವುದು ಮೊದಲಾಯ್ತು. ಸೇನೆಗೆ ಸೇರಲು ಒಪ್ಪದವರ ಮನೆಗೆ ಲೂಟಿ, ಬೆಂಕಿ. ದುರ್ಗಪುರದ ಸುತ್ತಣ ಜನತೆ ತತ್ತರಿಸಿತು.

ದಣ್ಣಾಯಕನಿಗೆ ದುರ್ಗಪುರದಲ್ಲಿ ರಕ್ಷಣೆ ದೊರೆತಿರುವ ಸುದ್ದಿ ತಿಳಿದೊಡನೆಯೆ ರಾಯ ಸಿಂಗನಾಯಕನಿಗೆ ರಾಯಸ ಕಳುಹಿದನು, ದಣ್ಣಾಯಕನನ್ನು ತಂದೊಪ್ಪಿಸಬೇಕೆಂದು. ಸುತ್ತಲ ಸೀಮೆಯಲ್ಲಿ ನಡೆದ ಹಾವಳಿಯ ಸುದ್ದಿ ಬಂದೊಡನೆಯೇ, ಅದನ್ನೆಲ್ಲ ಕೂಡಲೆ ತಹಬಂದಿಗೆ ತರಬೇಕೆಂದು ಸಿಂಗನಾಯಕನಿಗೆ ಆದೇಶವಿತ್ತನು. ಎರಡಕ್ಕೂ ಮೌನವೇ ಉತ್ತರ. ರಾಯ ಚಿಕ್ಕದೊಂದು ಪಡೆಯನ್ನು ದುರ್ಗಪುರದ ಆಕ್ರಮಣಕ್ಕಾಗಿ ಕಳುಹಿದನು. ಗಿರಿಪಂಜ್ತಿಯಲ್ಲಿ ಸಿಂಗನಾಯಕನ ಪಡೆ ನಡೆಸಿದ ಕಿರುಕುಳ ಯುದ್ಧದಲ್ಲಿ ವಿಜಯನಗರದ ಕಿರುಪಡೆ ನಿಶ್ಶೇಷ; ರಾಯನಿಗೆ ಸುದ್ದಿ ಕಳುಹಲೂ ಯಾರೂ ಹಿಂದಿರುಗಲಿಲ್ಲ.

ದಣ್ಣಾಯಕನ ಲೂಟಿ, ಹಾವಳಿ ಇನ್ನೂ ಹೆಚ್ಚುತ್ತಿರಲು ರಾಯ ಇನ್ನೂ ಕೊಂಚ ದೊಡ್ಡ ಪಡೆ ಕಳುಹಿದನು. ಇದು ಮೊದಲ ಪಡೆಯಂತೆ ನೇರವಾಗಿ ಗಿರಿರಾಜಿಯಲ್ಲಿ ನುಗ್ಗಿ ವಿನಾಶವಾಗದೆ ಬಹು ಎಚ್ಚರಿಕೆಯಿಂದ ಹೆಜ್ಜೆಯಿಡುತ್ತಿತ್ತು.

ಅವಿತವಿತೇ ಯುದ್ಧಮಾಡುತ್ತಿದ್ದ ವಿದ್ರೋಹಿ ಸೈನ್ಯ ಪೆಟ್ಟಿಗೆ ಸಿಲುಕದೆ, ಪೆಟ್ಟು ಕೊಡುತ್ತಿತ್ತು. ದೀರ್ಘಕಾಲ ನಡೆದ ಈ ಕದನ ವಿದ್ರೋಹಿಸೈನ್ಯಕ್ಕೆ ಅತ್ಯಲ್ಪ ನಾಶವನ್ನೂ, ವಿಜಯಸೈನಕ್ಕೆ ಅಪಾರ ನಾಶವನ್ನೂ ಉಂಟುಮಾಡಿತು. ಅರ್ಧಮರ್ಧ ವಿನಾಶಗೊಂಡ ವಿಜಯಸೈನ್ಯ ಸಂಪೂರ್ಣ ಉಧ್ವಸ್ತವಾಗಲು ಬಯಸದೆ ರಾಜಧಾನಿಗೆ ಹಿಂದಿರುಗಿತು. ರಾಯ ಅತೀವ ಕೋಪಗೊಂಡನು.

ಸಾಳುವ ತಿಮ್ಮ ಬಂಧಿತನಾದಂದಿನಿಂದ ಅಜಪರ್ಕ ತಿಮ್ಮನೇ ರಾಯನ ಮಂತ್ರಿ. ಅಜಪರ್ಕ ತಿಮ್ಮ ತಾನೇ ದಂಡನಾಯಕನಾಗಿ ದುರ್ಗಪುರಕ್ಕೆ ಪಡೆ ನಡೆಸಲು ತವಕಗೊಂಡ. ಮಂತ್ರಾಲೋಚನೆಯಲ್ಲಾಗಲಿ, ಸಮರ ಕೌಶಲ್ಯ ದಲ್ಲಾಗಲಿ ಸಾಳುವ ತಿಮ್ಮನಿಗೆ ತಾನು ಕಡಿಮೆಯಿಲ್ಲವೆಂಬುದನ್ನು ರಾಯನಿಗೆ ಮನದಟ್ಟು ಮಾಡುವ ಹಂಬಲ ಇವನಿಗೆ. ಮಂತ್ರಿ ಅಜಪರ್ಕ ತಿಮ್ಮ ಹಿರಿಯ ಪಡೆಗೊಂಡು ದುರ್ಗಪುರದ ಸುತ್ತಲೂ ಮುತ್ತಿಗೆಯ ಬೀಡುಬಿಟ್ಟ; ದುರ್ಗಪುರದಲ್ಲಿ ಕೆಲವು ವಾರಗಳಿಗೆ ಸಾಕಾಗುವಷ್ಟು ಮಾತ್ರ ದವಸವಿತ್ತು; ಸುತ್ತಲೂ ಮುತ್ತಿಗೆಯಿದ್ದು ಪುರದೊಳಕ್ಕೆ ಹೊರಗಿನಿಂದ ತುಸು ಕಾಳು ಕಡ್ಡಿಯೂ ಬರಲು ಅವಕಾಶವಿಲ್ಲ. ಕಿರುಕುಳ ಯುದ್ಧ ಹೂಡಿ ಗೊಂದಲ ಹೂಡಬೇಕೆಂದರೆ ವಿಜಯಸೈನ್ಯ ಬಿಟ್ಟದ ಮೇಗಡೆಗೇ ಕಾಲಿಡದು. ಪಟ್ಟಣಿಗರು ಉಪವಾಸ ಸಾಯುವ ಹೊತ್ತು ಬಂತು. ಸಿಂಗನಾಯಕ, ದಣ್ಣಾಯಕರು ಶರಣಾಗತರಾದರು. ಅಜಪರ್ಕ ತಿಮ್ಮ ದುರ್ಗಾಧಿಪತ್ಯವನ್ನು ಸಿಂಗನಾಯಕನ ಕೈತಪ್ಪಿಸಿ ತನ್ನ ನಚ್ಚಿನ ದಳಪತಿಯೊಬ್ಬನನ್ನು ನೇಮಕ ಮಾಡಿದ; ದಣ್ಣಾಯಕನನ್ನು ಕೈಸೆರೆ ಹಿಡಿದು, ಹೆಡಮುರಿಗೆ ಕಟ್ಟಿ, ಸರ್ಪಗಾವಲಿನಲ್ಲಿ ವಿಜಯನಗರಕ್ಕೆ ಕರೆದೊಯ್ದ.

ಭುವನವಿಜಯದ ಉಪವನದ ನಡುವಣ ಶಿಲಾಸನದಲ್ಲಿ ಕೃಷ್ಣದೇವರಾಯ ಮಂಡಿಸಿದಾನೆ. ಶೋಕ ಕ್ರೋಧ ಬೇಸರ ಜಿಗುಪ್ಸೆಗಳ ತುಮುಲ ರಾಗಭಾವಗಳಿಂದ ಗಳಿಗೆಗಳಿಗೆಗೂ ಮೊಗ ವಿವರ್ಣ. ಹೆಡಮುರಿಗೆ ಕಟ್ಟಲ್ಪಟ್ಟ ಸಾಳುವ

ತಿಮ್ಮ, ದಣ್ಣಾಯಕರು ಸದ್ಯದಲ್ಲೇ ರಾಯನಿಗೆ ಅಭಿಮುಖವಾಗಿ ತುಸು ದೂರದಲ್ಲಿ ನಿಲಿಸಲ್ಪಟ್ಟರು. ಭಟರು ಮೌನದಿಂದ ನೆಲ ನೋಡುತ್ತಿದ್ದರು; ಬಂದಿಗಳು ಮೌನದಿಂದ ನೆಲ ನೋಡುತ್ತಿದ್ದರು; ರಾಯ ಮೌನದಿಂದ ಬಂದಿಗಳನ್ನು ದುರುದುರು ನೋಡುತ್ತಿದ್ದನು. ಗಾಳಿ ಸ್ತಬ್ಧ; ಉಪವನದ ಗಿಡಬಳ್ಳಿಗಳು ನಿಶ್ಚಲ. ಅರಮನೆಯ ಕಲ್ಲುಗೋಡೆಗಳು ಎಂದಿನಂತೆ ನೀರವ. ಮೇಲೆ ನೀಲಾಕಾಶ ಮೋಡದ ತುಣುಕೂ ಇಲ್ಲದೆ ನಿಷ್ಪಂದ. ಚಿತ್ರಪಟದಂತೆ ಎಲ್ಲಾ ನಿಶ್ಚಲ, ನಿಷ್ಪಂದ, ನೀರವ.

ತುಟಿ ಎರಡು ಮಾಡಿ ನೀರವತೆಗೆ ಭಂಗಮಾಡಿದುದು ರಾಯನೆ: ' ದಣ್ಣಾಯಕ. ನೀ ವಿಷಜಂತು. ಕೆಂಡಸಂಪಿಗೆ ಗಿಡದ ಬುಡದಲ್ಲಿ ಅಡಗಿರುವ ವಿಷಸರ್ಪ. ನಿನಗೆ ಪೋಷಕನಾಗಿ, ನಿನ್ನ ಅಭಿವೃದ್ಧಿಗೆ ಕಾರಣನಾಗಿ ನಾ ಹಾವಿಗೆ ಹಾಲೆರೆದಂತಾಯ್ತು. ನಿನ್ನ ಅರಸನಿಗೆ ವಿಷವೂಡಿ ಕೊಲೆಪಾತಕಿಯಾದೆ, ರಾಜದ್ರೋಹಿಯಾದೆ. ಬಂಧನದಿಂದ ಕಳ್ಳನಂತೆ ಪಲಾಯನಮಾಡಿ ನ್ಯಾಯದ್ರೋಹಿಯಾದೆ. ಅಂತರ್ಯುದ್ಧವನ್ನು ಕೆಣಕಿ ರಾಜ್ಯದ್ರೋಹಿಯಾದೆ; ನಿರಪರಾಧಿ ಪ್ರಜಾನಾಶಮಾಡಿ ಪ್ರಜಾದ್ರೋಹಿಯಾದೆ. ನಿನಗಾವ ಶಿಕ್ಷೆ? '

ತುಸು ತಡೆದು ಗಂಭೀರ ಧ್ವನಿಯಲ್ಲಿ ದಣ್ಣಾಯಕ ಉತ್ತರಿಸಿದ: ' ಆಜನ್ಮ ತುರಂಗವಾಸ ಶಿಕ್ಷೆಯಲ್ಲಿ ಅಬಲನಾದ ಹೇಡಿಯಂತೆ ಮೂಳೆಸವೆಸಿ ನರಳುವುದರ ಬದಲು, ವೀರೋಚಿತ ಸ್ವಾತಂತ್ರ್ಯಕಾಂಕ್ಷೆಯಿಂದ ತುರಂಗದಿಂದ ನಿರ್ಗಮಿಸಿದೆ; ತುರಂಗರಕ್ಷಕರಲ್ಲೇ ಕೆಲವರು ನನಗೆ ನೆರವು ನೀಡಿ, ನಾ ಅಪರಾಧಿಯಲ್ಲ, ನನ್ನನ್ನು ಬಂಧನಕ್ಕೆ ಗುರಿಮಾಡಿದುದೇ ಅಪರಾಧ, ಎಂಬುದನ್ನು ಪುಷ್ಟೀಕರಿಸಿ ನನ್ನ ನಿರ್ಗಮನಕ್ಕೆ ಕಾರಣರಾದರು. ನಾ ಬಂಧನದಿಂದ ಹೊರಬಂದುದು ಮತ್ತೆ ಬಂಧಿತನಾಗಲೆಂದಲ್ಲ. ಮತ್ತೆ ಕಾರಾಗೃಹವಾಸಿಯಾಗಬಾರದೆಂದು ದುರ್ಗಮ ದುರ್ಗವಾಸಿಯಾದೆ; ದಾಳಿ ನಡೆದರೆ ಸಂರಕ್ಷಣೆಗೆಂದು ಪಡೆಗಟ್ಟಿದೆ. ನನ್ನ ಅಪರಾಧ ಯಾವುದು? '

ಅವನತ ಮುಖಿಯಾಗಿದ್ದ ರಾಯ ದಣ್ಣಾಯಕನ ಮಾತು ಕೇಳದವನಂತೆ ಭಟನಾಯಕನೆಡೆ ದೃಷ್ಟಿಯಿಟ್ಟು ಮೆಲ್ಲನೆಂದನು. ' ನಾಯಕ. ಸಾಳುವ ತಿಮ್ಮ, ದಣ್ಣಾಯಕ, ಗೋವಿಂದ ಮುವ್ವರನ್ನೂ ವಧ್ಯಸ್ಥಾನಕ್ಕೆ ಕರೆದೊಯ್ಯಿ. ಇವರು ಬ್ರಾಹ್ಮಣರಾದ್ದರಿಂದ ಮಾತ್ರ ವಧಿಸಬೇಡ; ಕಣ್ಣು ಇಂಗಿಸು. ನಂತರ ಕೃಷ್ಣನ ಜನ್ಮಸ್ಥಾನವೆ ಇವರಿಗೆ ಮರಣಸ್ಥಾನವಾಗಲಿ '

ಮುವ್ವರನ್ನೂ ವಧ್ಯಸ್ಥಾನಕ್ಕೆ ಒಯ್ಯಲಾಯ್ತು. ವಧಾಸ್ಥಾನದಲ್ಲಿ ಕಲ್ಲು ಚೌಕದ ಮೇಲೆ ಕೂರಿಸಲಾಯ್ತು. ಎರಡು ಸಬಳಗಳನ್ನು ಕುಲುಮೆಯಲ್ಲಿಟ್ಟು ಕೆಂಚಗೆ ಕಾಸಲಾಯ್ತು. ಹೋ! ಯಾರ ಕಣ್ಣು ಮೊದಲು? ಯಾರ ಕಣ್ಣು? ಹೆಚ್ಚುವಯಸ್ಸಾದ ತಿಮ್ಮನದೇ ಮೊದಲು.

' ಬೇಡ, ಬೇಡ. ಈ ಹಗರಣಕ್ಕೆ ನಾನೇ ಕಾರಣ. ನನ್ನ ಕಣ್ಣೇ ಮೊದಲು ' ಎಂದ ದಣ್ಣಾಯಕ.

' ನನ್ನೆದುರು ನನ್ನ ಪ್ರಾಯದ ಪುತ್ರರ ಕಣ್ಣಿಂಗುವುದನ್ನು ನಾ ನೋಡಿ ಸಹಿಸಲಾರೆ ' ಎಂದ ಸಾಳುವ ತಿಮ್ಮ.

ಭಟನಾಯಕನಿಗೆ ಹೊಸ ಯೋಚನೆ ಹೊಳೆಯಿತು. ಇನ್ನೆರಡು ಜೊತೆ ಸಬಳಗಳನ್ನೂ ಕೆಂಚಗೆ ಕಾಯಿಸಿದ. ಮುವ್ವರು ಭಟರು ಒಂದೊಂದು ಜೊತೆಯನ್ನು ಹಿಡಿದು ಬಂದಿಗಳ ಎದುರು ನಿಂತರು.

ಭಟನಾಯಕ ಗುಡುಗಿದ ' ಒಂದು....ಎರಡು....ಮೂರು '

ಚುರ್ ರ್ ರ್ ರ್ ರ್ !

ಮೂರು ಜೊತೆ ಕಣ್ಗಳೂ ಒಂದೇ ಬಾರಿ ಇಂಗಿಹೋದವು. ಹಾಯ್, ಹಾಯ್; ವಿಜಯನಗರದ ಕಣ್ಣು—ಸಾಳುವ ತಿಮ್ಮನ ಕಣ್ಣು—ಇಂಗಿ ಹೋಯ್ತು. ಮತ್ತೆ ಮೂವರೂ ಸೆರೆಮನೆಗೆ.

ಬಂಧನ ವಿಶೇಷ ಕ್ಲಿಷ್ಟದಾಯಕವಾಗಿದ್ದರೆ, ನೇತ್ರನಾಶ ಜೀವನಾಶಕ್ಕೂ ಕ್ಲಿಷ್ಟತರ. ಕಣ್ಣಿಲ್ಲದೆ ಎಂಥ ಬದುಕು,

ಎಂಥ ಆಕಾಂಕ್ಷೆ, ಅದೂ ಬಂಧನದಲ್ಲಿ. ತಮ್ಮ ಶಿರಚ್ಛೇದನವನ್ನಾದರೂ ರಾಯ ಆಣತಿಸಬಾರದಿತ್ತೆ, ಎಂದುಕೊಂಡನು ದಣ್ಣಾಯಕ. ತಾನು ಸೆರೆಯಿಂದ ಪಲಾಯನವೆಸಗಿ ತಂದೆ, ತಮ್ಮದಿರಿಗೆ ಹೆಚ್ಚಿನ ವಿಕ್ಲೇಶಕ್ಕೆ ಕಾರಣನಾದೆನಲ್ಲ, ಎಂದು ಚಿಂತಿಸಿದ. ತಾನಾದರೂ ದುರ್ಗಪುರದ ಕದನದಲ್ಲಿ ನೆಲಕ್ಕುರುಳುವವರೆಗೆ ಕಾದಾಡಬೇಕಿತ್ತು. ವೃಥಾ ಕೈಸೆರೆಯಾಗಿ ಹೇಡಿ ಬದುಕನ್ನು ನೂಕಬೇಕಾಯ್ತಲ್ಲ.

ಪ್ರಥಮ ಬಂಧನದಲ್ಲಿ ದಣ್ಣಾಯಕ ಬಂಧಿತ ವನರಾಜನಂತೆ ವರ್ತಿಸುತ್ತಿದ್ದರೆ, ಈಗ ಹೆಡೆ ತುಳಿದ ಸರ್ಪನಂತೆ ಬುಸುಗುಟ್ಟುತ್ತಿದ್ದನು. ದೃಷ್ಟಿ ಹೋದ ಶೋಕಕ್ರೋಧಗಳಲ್ಲಿ ನಡುಯೌವನದ ದಣ್ಣಾಯಕ ಹುಚ್ಚಾಗಿದ್ದನು. ಬೋನಿನಲ್ಲಿಟ್ಟ ಹೊಸ ಹುಲಿಯಂತೆ ಸೆರೆಮನೆಯ ಗುಹೆಯಲ್ಲಿ ಅತ್ತಿಂದಿತ್ತ ಧಾವಿಸುವನು. ರೋಷೋನ್ಮತ್ತನಾಗಿ ಗೋಡೆಗೆ ತಲೆ ಬಡಿದುಕೊಳ್ಳುವನು. ಊಟವಿಡಲು ಒಳ ಬಂದ ಪಹರೆಯವನನ್ನು ಹಿಸುಕಿ ಕೊಲ್ಲಲು ಯತ್ನಿಸಿದಾಗಿನಿಂದ ಈ ಗುಹೆಗೆ ಯಾರಾವರೂ ಕಾಲಿಡುವುದೇ ದುಸ್ತರ. ಬಾಗಿಲ ಮೂಲಕವೆ ಉಣಿಸಿನ ತಟ್ಟೆಯನ್ನು ಒಳನೂಕಲಾಗುತ್ತಿತ್ತು; ಅವನು ಸೋತು ಮಲಗಿದಂತೆ ಭಾಸವಾದಾಗ ತಟ್ಟೆಯನ್ನು ಹೊರತರಲಾಗುತ್ತಿತ್ತು. ಈಚೆಗೆ ತಟ್ಟೆ ಕೊಂಚವೂ ಬರಿದಾಗುತ್ತಿರಲಿಲ್ಲ; ದಣ್ಣಾಯಕ ಊಟದ ಗೊಡವೆಯನ್ನೇ ಬಿಟ್ಟಿದ್ದನು. ಮೈ ಕೃಶವಾಗುತ್ತ ನಡೆಯಿತು. ಹೀಗೆ ಎಷ್ಟು ದಿನ ನಡೆದೀತು. ಒಂದು ದಿನ ಮೈ ತಣ್ಣಗಾಯ್ತು.

ಸಾಳುವ ತಿಮ್ಮ ತೀರಿಕೊಂಡ ಸುದ್ದಿಯೂ ಅನತಿ ಕಾಲದಲ್ಲೇ ಬಂದಾಗ ರಾಯನ ಕಣ್ಗಳಿಂದ ಬಿಸಿಯ ಹನಿ ಜಗುಳಿದವು. ತಂದೆ ತೀರಿಕೊಂಡಾಗ ಪಟ್ಟ ವ್ಯಥೆಯೆ ಈಗಲೂ. ವೃದ್ಧಮಂತ್ರಿಯನ್ನು ಬಂಧನದಲ್ಲಿರಿಸಿ, ಕಣ್ಣಿಂಗಿಸಿದ ಪ್ರಭು ಆತ ಅಸುನೀಗಿದಾಗ ಈ ರೀತಿ ವ್ಯಥಿಸುವುದನ್ನು ಕಂಡವರು ಕೇಳಿದವರು ಬೆರಗುಗೊಂಡರು. ಮೃತನ ಅಂತಿಮ ದರ್ಶನಕ್ಕಾಗಿ ರಾಯನೇ ಸ್ವತಃ ಸೆರೆಮನೆಗೆ ಸಾಗಿದ ಸುದ್ದಿ ರಾಜಧಾನಿಯ ಮಾತಾಯಿತು.

ಸಾಳುವ ತಿಮ್ಮರಸ ಶ್ಮಶಾನಯಾತ್ರೆಗೆ ಸಿದ್ಧವಾಯ್ತು. ಪ್ರಭುವಿನ ಅವಕೃಪೆಗೆ ಪಾತ್ರನಾಗಿ, ಚಕ್ಷುಹೀನನಾಗಿ, ಸೆರೆಮನೆಯಲ್ಲಿ ನರಳುತ್ತಿದ್ದ ಬಂದಿಗೆ ತಕ್ಕ ಏರ್ಪಾಟಲ್ಲ; ರಾಜನಿರ್ಮಾತೃ ರಾಜ್ಯಸೂತ್ರಧಾರ ಮಹಾಮಂತ್ರಿಗೆ ಉಚಿತವಾದ ಶ್ಮಶಾನಯಾತ್ರೆ. ಸಾಳುವ ತಿಮ್ಮರಸನ್ನಿಟ್ಟ ಚಂದನ ಚಿತೆಗೆ ಕೊಳ್ಳಿ ಕೊಟ್ಟಾಗ, ಶ್ಮಶಾನಭೂಮಿಯಲ್ಲಿ ನಿಂತು ನೋಡುತ್ತಿದ್ದ ರಾಯನ ಕಣ್ಣು ತೇವವಾದವು. ಮೃತಾತ್ಮದ ಶಾಂತಿಗಾಗಿ ಕರ್ಮ, ಭೂರಿ ದಕ್ಷಿಣೆ, ಸಂತರ್ಪಣೆ ಅನ್ನದಾನ ಎಲ್ಲ ಸಾಂಗವಾಗಿ ನಡೆದವು; ದೇಗುಲಗಳಲ್ಲಿ ವಿಶೇಷ ಪೂಜೆಪುನಸ್ಕಾರಗಳನ್ನು ನಡೆಯಿಸಲಾಯ್ತು. ಸಾಳುವ ತಿಮ್ಮರಸ ಪಕ್ಷಪಾತಿಗಳೆಲ್ಲ ರಾಯನ ಘನತೆಯನ್ನು ಮೆಚ್ಚಿಕೊಂಡು, ಮಂತ್ರಿಯ ದುರ್ದೆಸೆಗಾಗಿ ತಮಗಿದ್ದ ಅಸಮಾಧಾನವನ್ನು ಮರೆತರು.





## ಸೂರ್ಯಾಸ್ತ

ಕರ್ಣಾಟಕಸೈನ್ಯದಿಂದ ಪದೇ ಪದೇ ಭಂಗಿತನಾದ ಸುಲ್ತಾನ ಆದಿಲ್‌ಷಹ ದ್ವೇಷದಿಂದ ತಳಮಳಿಸುತ್ತ, ಮುಯ್ಯಿ ತೀರಿಸಿಕೊಳ್ಳಲು ತಹತಹಿಸುತ್ತಿದ್ದನು. ಸಾಳುವ ತಿಮ್ಮ ಅಪಾದಿತನಾಗಿ, ಬಂಧಿತನಾದುದು ಆದಿಲ್‌ಷಹನಿಗೆ ಹಿಗ್ಗು; ಆದರೂ ತಾನು ತಂಟೆಹೂಡಿದರೆ ಕೃಷ್ಣದೇವರಾಯ ಮತ್ತೆ ಚತುರ ಸಾಳುವ ತಿಮ್ಮನ ನೆರವು ಪಡೆದು, ತನ್ನನ್ನು ಬಗ್ಗುಬಡಿಯುವನೆಂಬ ಅಂಜಿಕೆ. ಪ್ರತೀಕಾರಕ್ಕಾಗಿ ತಹತಹಿಸುತ್ತ, ಎದುರು ಸೆಣಸುವ ಬಲುಹಿಲ್ಲದೆ ಆದಿಲ್‌ಷಹನಿಗೆ ಉಭಯಸಂಕಟ. ಸಾಳುವ ತಿಮ್ಮ ಚಕ್ಷುಹೀನನಾಗಿ ಕೊನೆಗೆ ಸೆರೆಮನೆಯಲ್ಲಿ ಅವಸಾನಗೊಂಡುದು ಆದಿಲ್‌ಷಹನಿಗೆ ಸುದ್ದಿಯ ಸೊದೆಯಾಯ್ತು. ಕೊನೆಯ ಪ್ರಯತ್ನವಾಗಿ ಇಂಥ ಸದವಕಾಶವನ್ನು ಉಪಯೋಗಿಸಿಕೊಳ್ಳುವ ಛಲ ಉನ್ಮುಖವಾಯ್ತು.

ಕನ್ನಡಕಟ್ಟಾಳುಗಳಿಂದ ಮುಗ್ಗಲು ಮುರಿಯ ಏಟು ತಿಂದು ಚದುರಿದ್ದ ತನ್ನ ಪಡೆಯನ್ನು ಒಟ್ಟುಗೂಡಿಸಿದನು; ಹೊಸ ಅಶ್ವದಳ; ಹಸ್ತಿದಳಗಳನ್ನು ಕಟ್ಟಿದನು. ಈಚೆಗೆ ತನ್ನ ಕೈತಪ್ಪಿದ್ದ ರಾಯ್ಚೂರುದುರ್ಗವನ್ನು ಪುನರ್ವಶೀಕರಿಸುವ ಹೆಬ್ಬಯಕೆಯಿಂದ ಸೇನಾಸಮೇತನಾಗಿ ಮುನ್ನಡೆದನು. ಸುದ್ದಿ ತಿಳಿದು ರಾಯ್ಚೂರಿಗರು ಕಳವಳಗೊಂಡರು. ಪುತ್ರ ವಿಯೋಗ, ಮಂತ್ರಿವಿಯೋಗಗಳಿಂದ ದುಃಖತಪ್ತನಾದ ಪ್ರಭು ನೆರವಿಗಾಗಿ, ಸಂರಕ್ಷಣೆಗಾಗಿ ಮುಂಬರುವುದು ಅಸಾಧ್ಯ; ಕನ್ನಡಿಗರಾದ ತಾವು ಮತ್ತೆ ಸ್ವಾತಂತ್ರ್ಯವನ್ನು ಕಳೆದುಕೊಂಡು ಪರರಾಯರ ದಬ್ಬಾಳಿಕೆಗೆ ತುತ್ತಾಗಬೇಕಾಯ್ತೆ, ಎಂದು ರಾಯ್ಚೂರಿಗರು ತತ್ತರಿಸಿದರು. ದುರ್ಗಾಧಿಪತಿ ದುರ್ಗದ್ವಾರವನ್ನು ಮುಚ್ಚಿಸಿ, ಸೈನ್ಯವನ್ನು ಸಜ್ಜುಗೊಳಿಸಿದನು.

* * * *

ಕತ್ತಲೆ ಆಗತಾನೆ ಪಸರಿಸಿತ್ತು. ಭುವನವಿಜಯದ ಮೇಲುಪ್ಪರಿಗೆಯಲ್ಲಿ ಅಮೃತಶಿಲಾಪೀಠದಮೇಲೆ ರಾಯ ಆಸೀನ. ಉಪವನದ ಕುಸುಮಸೌರಭಪೂತ ಮಂದಾನಿಲ ಅವನ ನೊಂದಮನಕ್ಕೆ, ಬಳಲಿದ ಮೈಗೆ ಹಿತಕಾರಿ. ರಾಯನಿಂದು ಮೊದಲಿನ ಉತ್ಸಾಹ ಮೂರ್ತಿಯಲ್ಲ, ಉಲ್ಲಾಸಮೂರ್ತಿಯಲ್ಲ. ಮನಸ್ಸು ಚಿಂತಾಕುಲ, ದೇಹ ಶ್ರಾಂತ. ಸರ್ವ ಸುಖಭೋಗದ ನಡುವೆ ಇದಕ್ಕಿದ್ದಂತೆ ಅದಾವುದೋ ಅವ್ಯಕ್ತ ಚಿಂತೆಯಿಂದ ಮ್ಲಾನಗೊಳ್ಳುವನು. ರಾಯನ ಸನಿಹದಲ್ಲಿ ರತ್ನಗಂಬಳಿಯ ಮೇಲೆ ವೀಣಾವಿಶಾರದೆ ಮಂಜರಿ ಶೋಕಗೀತೆಯನ್ನು ದನಿಸುತ್ತಿದ್ದಳು. ತನ್ನ ಸುತ್ತಲ ಸನ್ನಿವೇಶವನ್ನು, ತನ್ನಿರವನ್ನು ರಾಯ ಅರೆಗಳಿಗೆ ಮರೆತು ವೀಣಾನಾದದಲ್ಲಿ ವಿಲೀನನಾದನು.

'ಪ್ರಭು!'

ರಾಯ ಮೊಗದಿರುಹಿ ನೋಡಿದನು. 'ಯಾರದು' ದನಿಯಲ್ಲಿ ಅಸಮಾಧಾನದ ಗಡಸುತನವಿತ್ತು, ತನ್ನ ಗಾನ ವಿಹಾರಕ್ಕೆ ವಿಘ್ನವಾದುದಕ್ಕಾಗಿ. ತಟಕ್ಕನೆ ಗುರುತು ಹತ್ತಿತು, 'ಓ, ನೀನು! ಬಾ. ತ್ವರಿತವೇನು?'

ಬೇಹುಗಾರ ವೆಂಕಟ ಬಿಜಾಪುರದಿಂದ ಐತಂದಿದ್ದನು; ಅವನು ತೋರುವ ರಾಜಮುದ್ರೆಗೆ ವಿಜಯನಗರದಲ್ಲಿ ಎಲ್ಲೆಲ್ಲೂ ಪ್ರವೇಶ. 'ತ್ವರಿತವೇನು. ಅತಿ ತ್ವರಿತ. ಆದಿಲ್‌ಷಹ ಪಡೆಗೊಂಡು ರಾಯ್ಚೂರ ಮುತ್ತಿಗೆಗಾಗಿ ಬಿಜಾಪುರದಿಂದ ನಿರ್ಗಮಿಸಿದಾನೆ. ಈ ವೇಳೆಗಾಗಲೆ ರಾಯ್ಚೂರ ಬಳಿ ಸಾರಿರಬಹುದು.'

ರಾಯನಿಗೆ ನಿಜಕ್ಕೂ ಅಚ್ಚರಿ. ಹೀಗೂ ಉಂಟೆ! ಆದರೆ ಸುದ್ದಿ ತನಗೆ ಮೊದಲೇ ಬರಲಿಲ್ಲವಲ್ಲ! ಈಗಲಾದರೂ ಬಂದಿತು! ವೆಂಕಟ ನಚ್ಚಿನ ಬೇಹುಗಾರ; ಯಾರಿಗೂ ತಿಳಿಯದ ಸುದ್ದಿಗಳನ್ನು ವೆಂಕಟ ಬಲ್ಲ; ಇತರರು ತಿಳಿವ ಮೊದಲೇ ಬಲ್ಲ. ಅವನಿಗೆ ತಿಳಿವಮೇಲೆ ಜಾಗ್ರತೆಯಾಗಿ ತನಗೂ ಸುದ್ದಿ ಬರುವುದು. ವೆಂಕಟನ ಮಾತು ಎಂದೂ ಸುಳ್ಳಾದುದಿಲ್ಲ

ಕ್ರೋಧ, ಅಸಮಾಧಾನಗಳಿಂದ ತಳಮಳಿಸಿದನು ರಾಯ. ತನ್ನ ಹೆಸರೇ ಸಿಂಹಸ್ವಪ್ನವಾದ ಆದಿಲ್‌ಷಹನಿಗೆ ಮತ್ತೆ ಇಂಥ ಒಣಹೆಮ್ಮೆಯೆ! ತನ್ನ ಪದಚುಂಬನಮಾಡಲು ಕೊಟ್ಟ ಕರೆಯನ್ನು ಇದುವರೆಗೂ ಪೂರಯಿಸುವ ಬಲುಹಿಲ್ಲದ ಹೆಂಬೇಡಿಗೆ ಈಗ ರಾಯ್ಚೂರದಿಗ್ವಿಜಯವನ್ನು ಕೈಗೊಳ್ಳುವ ಅಂಥತೆಯೆ! ರಾಯನಿಗೆ ಮುನಿಸೆಷ್ಟೋ ಜಿಗುಪ್ಸೆಯೂ ಅಷ್ಟೆ, ತಾನಿಲ್ಲದಿರಲು ಕುರಿ ಪರಾಕ್ರಮದ ಸೋಗು ತಾಳಿದಾಗ ಸಿಂಹ ಜಿಗುಪ್ಸೆಗೊಳ್ಳಬಹುದಾದಂತೆ. ಕಾಲ್ಗೆ ಕಡಿಯ ತೊಡಗುವ ತಿಗಣೆಯನ್ನು ಒರೆಸಿಹಾಕುವಂತೆ ಆದಿಲ್‌ಷಹನನ್ನೂ ಒರೆಸಿಹಾಕಬೇಕೆನುವ ಬಯಕೆ ಉಂಟಾಯ್ತು.

'ಯಾರಲ್ಲಿ!'

ಊಳಿಗದವಳು ನೃದುಹೆಜ್ಜೆಗಳನ್ನಿಡುತ್ತ ಓಡಿ ಬಂದಳು.

'ಈ ಕೂಡಲೆ ಕುದುರೆಯನ್ನು ಸಜ್ಜುಗೊಳಿಸ ಹೇಳು.'

ಊಳಿಗದವಳು ಹಿಂದೆ ಹಿಂದೆ ಹೆಜ್ಜೆಯಿಡುತ್ತ ಮರೆಯಾದಳು. ಇಂಥ ಅವೇಳೆಯಲ್ಲಿ ಕುದುರೆ ಎಲ್ಲಿಗೆ, ಎನ್ನುವುದು ವೆಂಕಟನಿಗೆ ಹರಿಯದಾಯ್ತು ; ಅದೂ ಒಂಟಿ ಕುದುರೆ !

'ಪ್ರಭು ! ನಾನಿತ್ತ ಸುದ್ದಿಯೆ ?'

'ಮತ್ತಿನ್ನೇನು !'

'ಒಂಟಿಯಾಗಿ ?'

ರಾಯ ಉತ್ತರಿಸಲಿಲ್ಲ. ವೀಣಾವಿತಾನ ನಿಂತಿತ್ತು ; ಅದರ ಅಶ್ರುತರವ ಅವನ ಕಿವಿಯಲ್ಲಿ ಗುಯ್ ಗುಡುತ್ತಿದ್ದಂತಿತ್ತು. ಅದೋ. ಅದೇನು ! ಓ ; ಭೀಕರ ರಣರಂಗದ ಹುಯ್ಲು ! ರಣಭೂಮಿಯ ಹುಯ್ಲಿನ ಸ್ಮೃತಿ ವೀಣೆಯ ಇನಿದನಿಯನ್ನು ಮರೆಸಿ ಕಿವಿಯಲ್ಲಿ ಮೊರೆಯಿತು. ರಾಯ ಧಡಧಡನೆ ಓಡಿಹೋದನು. ರಾಯನ ವಿಚಿತ್ರ ವರ್ತನೆ ವೆಂಕಟನಿಗೆ ಅರ್ಥವಾಗದಾಯ್ತು ; ಮಂಜರಿಯಂತೂ ಕಂಗಾಲು.

ವೆಂಕಟ ತುಸು ಸಮಯ ಅಲ್ಲೇ ನಿಂತನು, ಪ್ರಭು ಬಂದಾನೆಂದು. ಉಹ್ಞು, ಸುಳಿವಿಲ್ಲ. ಮೆಲ್ಲನೆ ಹೊರ ಹೆಜ್ಜೆ ಹಾಕಿದನು. ಪ್ರಾಸಾದದ ಹೊರ ಸಾರಿದಾಗ ನಿರ್ಗಮಿಸುತ್ತಿರುವ ಖುರಪುಟಧ್ವನಿ ಕೇಳಿಬಂತು. ಪ್ರಭು ಏಕಾಕಿಯಾಗಿ ಇದುವರೆಗೆ ಎಲ್ಲೂ ಹೊರಟಿರಲಿಲ್ಲ ; ಸಮರಮುಖಕ್ಕಿರಲಿ ಬೇಟೆಗೂ ಕೂಡ. ರಾತ್ರಿಯ ಅವೇಳೆಯಲ್ಲಿ ಸಾಮ್ರಾಜ್ಯದ ಅಧಿಪತಿ ದೂರದ ಸಮರಮುಖಕ್ಕೆ ಪಯಣಹೊರಡುವುದೆಂದರೆ ! ಪ್ರಭುವಿನ ಅನವಶ್ಯಕ ಸಾಹಸಕ್ಕಾಗಿ ವೆಂಕಟ ನಿಟ್ಟುಸಿರು ತೀಡಿದನು.

ರಾಯ್ಚೂರಿಗೆ ಎರಡು ಹರಿದಾರಿ ದೂರದ ಸಮರಶಿಬಿರ. ಹಿಂದಿನ ರಾಯ್ಚೂರ ಕಾಳಗದಲ್ಲಿ ಸುಲ್ತಾನನ ಶಿಬಿರ ಸರ್ವಸ್ವವೂ ಸೂರೆಯಾಗಿದ್ದರೂ, ಏಟು ತಿಂದು ಸೇನೆ ಪಲಾಯನ ಹೊಂದಿದ್ದರೂ ಈಗ ಗಾಯಗಳು ಮಾದಿವೆ. ಇಂದು



ಮತ್ತೆ ಸುಲ್ತಾನನಶಿಬಿರ ಆಮೋದಪೂರಿತ. ಶಿಬಿರ ಸುಲ್ತಾನಷಾಹಿಯ ವಿಲಾಸ, ಭೋಗಗಳಲ್ಲಿ ಮುಗ್ನ.

ಬಿಜಾಪುರದ ಸುಲ್ತಾನ ಆದಿಲ್‌ಷಹ ವೈಭವ ಯುಕ್ತ ಡೇರೆಯಲ್ಲಿ ಬೀಡುಬಿಟ್ಟಿದಾನೆ. ಸಮರಶಿಬಿರದ ತಾತ್ಕಾಲಿಕ ಬಿಡಾರವಾದರೂ ಸರ್ವಾಲಂಕೃತ; ಮಖ ಮಲ್‌ನಿಂದ ಜರಿಯ ಬಟ್ಟೆಗಳಿಂದ ಝಗಝಗಿಸುತ್ತಿದೆ. ಆದಿಲ್‌ಷಹ ಮೃದುಶಯ್ಯೆಯಲ್ಲಿ ಕಾಲುಚಾಚಿ ವಿರಮಿಸಿ ದಾನೆ. ಕೆಲದಲ್ಲಿ ಆಪ್ತವರ್ಗಕ್ಕೆ ಸೇರಿದ ಅಧಿಕಾರಿಗಳು. ದ್ರಾಕ್ಷಾರಸವನ್ನು ಕುಡಿದು ಕುಡಿದು ಕಣ್ಣು ತುಸು ರಕ್ತಿಮ ಛಾಯೆ ಹೊಂದಿವೆ. ಪಾರಸೀಸ್ಥಾನದಿಂದ ಹೊಸತಾಗಿ ಕರೆತರಿಸಲ್ಪಟ್ಟ ನೃತ್ಯಾಂಗನೆಯರೀರ್ವರು ಸುಲ್ತಾನನ ಸಮ್ಮುಖದಲ್ಲಿ ನರ್ತಿಸುತ್ತಿದಾರೆ; ಕೆಲದಲ್ಲಿ ಹಿಮ್ಮೇಳದ ತಂಡ.

ದ್ವಾರಪಾಲಕ ಸುಲ್ತಾನನ ಬಳಿ ಸರಿದು 'ಖಾವಂದ್! ರಾಯ್ಚೂರಿನಿಂದ ಬೇಹುಗಾರ ಬಂದಿದಾನೆ' ಎಂದನು.

'ಆ ಸೈತಾನ ಈಗೇಕೆ ಬಂದ ಇಲ್ಲಿ, ನಮ್ಮ ಸುಖಭಂಗಮಾಡಲು. ನೃತ್ಯಮುಗಿದಮೇಲೆ ಕಾಣಿಸಿಕೊಳ್ಳ ಹೇಳು'.

'ಕ್ಷಮಿಸಬೇಕು, ಖಾವಂದ್. ತುಂಬ ಜರೂರು, ಎನ್ನುತ್ತಾನೆ'.

'ಥತ್, ಬರಹೇಳು'.

ದ್ವಾರಪಾಲಕ ನಿರ್ಗಮಿಸಿ, ಬೇಹುಗಾರನನ್ನು ಒಳ ಕಳುಹಿದನು.

'ಸೈತಾನ್! ಎಂಥ ಅವೇಳೆಯಲ್ಲಿ ಬಂದೆ. ನಿನಗೆ ಹೊತ್ತುಗೊತ್ತಿನ ಪರಿವೆ ಇಲ್ಲವೇನು'.

'ಖಾವಂದ್, ಖಾವಂದ್! ತುಂಬ ಜರೂರಿನ ಸುದ್ದಿ. ಕೃಷ್ಣದೇವರಾಯ ಈ ಬೆಳಿಗ್ಗೆ ರಾಯ್ಚೂರುದುರ್ಗಕ್ಕೆ ಆಗಮಿಸಿದಾನೆ'.

ದ್ರಾಕ್ಷಾರಸ ಮಧುರ ಗಾಯನ, ಅಪೂರ್ವ ನರ್ತನಗಳು ಆದಿಲ್‌ಷಹನ ಪ್ರಜ್ಞೆಯನ್ನು ತುಸು ತಪ್ಪಿಸಿದ್ದವು. ಬೇಹುಗಾರನಿತ್ತ ಸುದ್ದಿ ಷಹನಿಗೆ ವಿಷಬಾಣದಂತೆ ಚುಚ್ಚಿತು. ತಟಕ್ಕನೆ ಎದ್ದು ಕುಳಿತು 'ಏನು? ಏನಂದೆ?' ಎಂದನು.

'ವಿಜಯನಗರದ ಅಧಿಪತಿ ಕೃಷ್ಣದೇವರಾಯ ಈ ಬೆಳಿಗ್ಗೆ ಏಕಾಕಿಯಾಗಿ ರಾಯ್ಚೂರಿಗೆ ಬಂದು ತಲುಪಿದಾನೆ. ಮುತ್ತಿಗೆ ನಡೆದಿರುವ ಸುದ್ದಿ ಕೇಳಿ ಮುಂಜಾಗ್ರತೆಗಾಗಿ ತಾನೇ ಮುಂದಾಗಿ ಬಂದಿರಬಹುದು; ಹಿಂದಿನಿಂದ ಭಾರಿಯಾದ ಸೈನ್ಯ ಬರುತ್ತಿರುವುದರಲ್ಲಿ ಸಂದೇಹವಿಲ್ಲ'.

'ನಿನ್ನ ತಲೆ ಕಟ್ಟೆಲ್ಲವಷ್ಟೆ. ಪುತ್ರವಿಯೋಗದಿಂದ ದುಃಖಿತನಾಗಿ, ಮಂತ್ರಿಯ ಅವಸಾನದಿಂದ ಅಂಗಚ್ಛೇದನವಾದಂತೆ ಪರಿತಪಿಸುತ್ತ ವಿಜಯನಗರದಲ್ಲಿ ತಳಮಳಿಸುತ್ತಿರುವ ಕೃಷ್ಣದೇವರಾಯನೆತ್ತ! ರಾಯ್ಚೂರೆತ್ತ!'

'ಇಂದು ಬೆಳಿಗ್ಗೆಯೇ ಕೃಷ್ಣದೇವರಾಯ ರಾಯ್ಚೂರಿಗರಿಗೆ ಬಹಿರಂಗ ದರ್ಶನವಿತ್ತು ಹುರಿದುಂಬಿಸಿದ. ಅನಿರೀಕ್ಷಿತ ಆಕ್ರಮಣದಿಂದ ಪರಾಜಯಭೀತಿ ಹೊಂದಿದ್ದ ರಾಯ್ಚೂರಿಗರು ರಾಯನ ದರ್ಶನ ಮಾತ್ರದಿಂದಲೆ ಜಯಿಸಿದಂತೆ ಭಾವಿಸಿದರು. ಮಹಾನವಮಿಯ ದಿಬ್ಬದಮೇಲೆ ಸ್ವರ್ಣಪೀಠದಲ್ಲಿ ಮಂಡಿಸಿದ್ದ ರಾಯನನ್ನು ಜನದೊಂದಿಗೆ ನಾನೂ ನೋಡಿದೆ. ರಾಯನ ಆಗಮನದ ಸಂತೋಷಾರ್ಥವಾಗಿ ಇಂದು ರಾಯ್ಚೂರಿನಲ್ಲೆಲ್ಲ ವಿಜೃಂಭಣೆಯ ಉತ್ಸವಾಚರಣೆ'.

ಸುಲ್ತಾನನ ಮೊಗ ಕಪ್ಪಿಡಿಯಿತು. ಆಸೀನರಾಗಿದ್ದ ಇತರ ಅಧಿಕಾರಿಗಳ ಮೊಗದ ಹರ್ಷ ಇಳಿಯಿತು.

ರಾಜಕೀಯದ ಗೊಂದಲವರಿಯದ, ನರ್ತನದ ಲಲಿತ ಮಧುರ ಜೀವನವೇ ಸರ್ವಸ್ವವಾದ ಪಾರಸೀ ನೃತ್ಯಾಂಗನೆಯರು ಪ್ರದರ್ಶನವನ್ನು ಮುಂದುವರಿಸಿದರು ; ಸುಲ್ತಾನನ ಇಳಿಮುಖವನ್ನು ಈಕ್ಷಿಸಿ, ತಮ್ಮ ನೃತ್ಯ ಆಮೋದಕಾರಿಯಾಗಲಿಲ್ಲ, ಎಂಬ ಭ್ರಾಂತಿಯಿಂದ ಆತನಿಗೆ ಬಹು ಸಮೀಪವಾಗಿ ಅಂಗವಿನ್ಯಾಸಮಾಡಿ, ಸುಲ್ತಾನನ ಕಿವಿಯಲ್ಲೋ ಎಂಬಂತೆ ಹತ್ತಿರವಾಗಿ ಹಾಡಲು ತೊಡಗಿದರು. ಅಸಹನೆಯಿಂದ ಸುಲ್ತಾನನ ಹುಬ್ಬು ಕೂಡಿದವು.

'ಚಲೋ ಜಾವ್ ಯಹಾಸೆ'

ನೃತ್ಯಾಂಗನೆಯರು ಬೆಚ್ಚಿದರು. ಇತರರಲ್ಲಿ ಉಗ್ರ ಅಸಮಾಧಾನಗೊಂಡು ಸಿಡಿಮಿಡಿಗುಟ್ಟುತ್ತಿದ್ದರೂ, ತಾವು ಸಮ್ಮುಖಕ್ಕೆ ಐತಂದೊಡನೆಯೇ ಹಸನ್ಮುಖಿಯಾಗಿ ಹಿಗ್ಗುತ್ತಿದ್ದ ಸುಲ್ತಾನ ಇಂದು ತಮ್ಮನ್ನೇ ಛೀಕರಿಸಿದ್ದಕ್ಕಾಗಿ ಬೆಚ್ಚಿದರು. ಬೆಚ್ಚಿ, ತಟಕ್ಕನೆ ಡೇರೆಯಿಂದ ಹೊರಗೆ ಹೋದರು ; ಹೋಗಿಬಿಟ್ಟರು.

* * * *

'ಹೋದರೆ ? ಹೋಗಿಬಿಟ್ಟರೆ ?' ಕೃಷ್ಣದೇವರಾಯ ಆಶ್ಚರ್ಯಚಕಿತನಾಗಿ ಪ್ರಶ್ನಿಸಿದ.

'ಹೌದು, ಪ್ರಭು, ನಿಸ್ಸಂಶಯವಾಗಿ. ಅಲ್ಲಿ ಸಮರಶಿಬಿರವಿದ್ದ ಚಹರೆಯೇ ಇಲ್ಲದಂತೆ ವಿಜಾಪುರ ಸೈನಿಕರೆಲ್ಲ ಹೋಗಿಬಿಟ್ಟಿದಾರೆ' ದುರ್ಗಾಧಿಪತಿ ಹೆಮ್ಮೆಯಿಂದ ಬೀಗಿದ; 'ಪ್ರಭುಗಳ ಆಗಮನದ ಸುದ್ದಿ ಕಿವಿಗೆ ಬಿದ್ದೊಡನೆಯೆ ಆದಿಲ್‌ಷಹ ಬೆಚ್ಚಿ, ಹುಲಿಯಂತೆ ಬಂದವನು ಇಲಿಯಾಗಿ ಹೋದ. ನೆನ್ನೆ ಸಂಜೆ ಸಮರಶಿಬಿರವಾಗಿದ್ದುದು ಇಂದು ಮುಂಜಾವು ಬಟ್ಟಬರಿಯ ಭೂಮಿ ; ಕತ್ತೆಕುದುರೆಗಳ ಲದ್ದಿಯಿಂದ ಅಲ್ಲಲ್ಲಿ ಕರಿಕಾದ ಒಣಕಲು ಭೂಮಿ. ಆದಿಲ್ ಷಹ ಸೇನಾಸಮೇತನಾಗಿ ರಾತ್ರೋರಾತ್ರಿ ಓಡಿಹೋಗಿದಾನೆ ವಿಜಾಪುರಕ್ಕೆ, ತಾವು ಅನಿರೀಕ್ಷಿತವಾಗಿ ರಾಯಚೂರಿಗೆ ಆಗಮಿಸಿದ ಸುದ್ದಿ ಕೇಳಿ'.

ರಾಯ ಗಹಗಹಿಸಿ ನಕ್ಕನು. ಇಂಥ ಸುಲಭ ವಿಜಯ ಎಂದೆಂದೂ ಅವನಿಗೆ ದೊರಕಿಲ್ಲ. ಉತ್ಕಲ ಸೀಮೆಯಲ್ಲಿ ತೀರ ದೂರ ನುಗ್ಗಿದಾಗ ಮಹಾಪಾತ್ರಸಹಿತನಾದ ಗಜಪತಿಯ ಬಲವನ್ನು ಬಲದಿಂದಲೆ ಮುರಿಯುವ ಸಾಧ್ಯತೆಯಲ್ಲಿ ಸಂಶಯಮೂಡಲು, ತಂತ್ರ ಯುದ್ಧನಿವಾರಣೆಮಾಡಿ ಜಯವನ್ನು ದೊರಕಿಸಿತೇನೋ ಹೌದು. ಆ ಜಯ ಸ್ವಪ್ರಯತ್ನದಿಂದ, ತಂತ್ರಸಾಧನೆಯಿಂದ ಆದುದು. ಈ ವಿಜಯವಾದರೋ ಅನಿರೀಕ್ಷಿತ; ನೆತ್ತರು ಸುರಿಯಲಿಲ್ಲ, ತಂತ್ರದ ಸಾಧನೆಯಿಲ್ಲ. ಕರ್ಣಾಟಕಸಿಂಹನ ಆಗಮನವೆ ಆದಿಲ್‌ಷಹನ ಪಲಾಯನ ಕಾರಣ.

ಗಹಗಹಿಸಿ ನಕ್ಕ ರಾಯನ ವಿಸ್ತೃತ ಮುಖ ಇದ್ದಕ್ಕಿದ್ದಂತೆ ಪೆಡಸಾಯ್ತು. ಹುಬ್ಬು ಗಂಟಿಕ್ಕಿತು. ಸದ್ಯದಲ್ಲಿ ಹಿಗ್ಗಿದ ಮೊಗ ಸ್ಮೃತಿಯಲ್ಲಿ ಕವಡಿತು. ತನ್ನ ಪದಚುಂಬನಮಾಡಲು ಇತ್ತ ಆಹ್ವಾನವನ್ನು ಹಿಂದೆರಡು ಬಾರಿ ಅಂಗೀಕರಿಸುವೆನೆಂದವನು ತಾನು ಮುಂದಾದಾಗ ನಿರಾಕರಿಸಿ ಪಲಾಯನಮಾಡಿದ ಹೆಂಬೇಡಿ ಹಂದಿ ಆದಿಲ್‌ಷಹೆ ಇಂದೂ ಪಲಾಯನವನ್ನು ಪಠಿಸಿ ತನಗೆ ದೊರೆತ ಸದವಕಾಶವನ್ನು ಭಗ್ನಗೊಳಿಸಿದನೆ! ಈ ಕ್ಷುದ್ರ ಜಂತುವಿನ ಹಲ್ಲು ಉಗುರು ಬಾಲಗಳನ್ನು ಕಿತ್ತುಹಾಕದಿದ್ದರೆ ತನಗೇ ಅವಮಾನ!

ವಿಜಾಪುರಕ್ಕೆ ಓಲೆ ಹೋಯಿತು. 'ಸುಲ್ತಾನ. ನನ್ನನ್ನು ಭೇಟಿಯಾಗುವೆಯೆಂಬ ವಚನವನ್ನು ಪದೇ ಪದೇ ಭಂಗಿಸಿದ್ದೀ. ನಾ ನಿನ್ನಮೇಲೆ ಅತ್ಯುಗ್ರ ಸಂಗ್ರಾಮವನ್ನೇ ಹೂಡುವೆ. ನೀ ನನ್ನ ಸಾಮಂತನಾಗುತ್ತಿ, ನನ್ನ ದಾಸ ನಾಗುತ್ತಿ. ನಿನ್ನಿಂದ ಬೆಳಗಾವಿಯನ್ನು ಕಿತ್ತುಕೊಂಡ ಹೊರತು ನನಗೆ ಸಮಾಧಾನವಿಲ್ಲ. ಯುದ್ಧಕ್ಕೆ ಸನ್ನದ್ಧನಾಗು'.

ಮಳೆಗಾಲ ಮೊದಲಾಯ್ತು; ಮಳೆಗಾಲದಲ್ಲಿ ಪಡೆಯನ್ನು ಮುನ್ನಡೆಸುವುದಾದರೂ ಅಸಾಧ್ಯ. ಅಲ್ಲದೆ ಈಗ ಕೈಲಿರುವುದಾದರೂ ರಾಯ್ಚೂರ ಚಿಕ್ಕಪಡೆ. ವಿಜಾಪುರರಾಜ್ಯದ ಮೇಲೆ ಇನ್ನೊಮ್ಮೆ ದಾಳಿಮಾಡಲು ತಕ್ಕಷ್ಟು

ಹಿರಿದಾದ ಪಡೆ ಬೇಡವೇ ! ಈಗಲೇ ಛಲ ತೀರಿಸಿಕೊಳ್ಳುವ ಮಡುಕಿಗೆ ಎಳಸದೆ ರಾಯ ವಿಜಯನಗರಕ್ಕೆ ಹಿಂದಿರುಗಿದ. ಮೊದಲ ಕೆಲಸವೆಂದರೆ ಸೈನ್ಯದ ಸನ್ನಾಹ.

ತುಪಾಕಿಸಿಪಾಯಿಗಳ ಬಲದಿಂದ ಎಂಥ ಅಪೂರ್ವ ಸಾಹಸ ನಿರ್ವಹಣೆಯಾಗುವುದೆಂಬುದು ಮೊದಲ ರಾಯ್ಚೂರ ಮುತ್ತಿಗೆಯಿಂದ ರಾಯನಿಗೆ ಮನವರಿಕೆಯಾಗಿತ್ತು. ಅನಂತರದ ಸಮರಗಳಲ್ಲಿ ರಾಯ ತುಪಾಕಿಸಿಪಾಯಿಗಳ ನೆರವನ್ನು ಹೆಚ್ಚು ಹೆಚ್ಚಾಗಿ ಪಡೆಯತೊಡಗಿದ್ದ. ಈಗ ಬಿಜಾಪುರ ದಿಗ್ವಿಜಯವನ್ನು ಕೈಗೊಳ್ಳುವ ಯತ್ನದಲ್ಲಿ ತುಪಾಕಿ, ಫಿರಂಗಿಗಳ ಪಡೆ ಹಿರಿದಾಗಿರುವುದು ಅತ್ಯವಶ್ಯಕವೆಂದು ರಾಯನಿಗೆ ಖಚಿತ.

ತುಪಾಕಿ, ಫಿರಂಗಿಗಳ ನಿರ್ಮಾಣದಲ್ಲಿ ನಿಷ್ಣಾತರಾದ ಪೋರ್ಚುಗೀಸರ ನೆರವು ಇದಕ್ಕೆ ಬೇಕು. ರಾಯ ರಾಯಭಾರಿಯನ್ನು ಗೋವೆಗೆ ಕಳುಹಿದನು : ವಿಜಾಪುರ ದಿಗ್ವಿಜಯದಲ್ಲಿ ವಿಜಯಸೈನ್ಯಕ್ಕೆ ಪೋರ್ಚುಗೀಸರು ತುಪಾಕಿ, ಫಿರಂಗಿಗಳ ನೆರವು ನೀಡಬೇಕು ; ಪ್ರತಿಫಲವಾಗಿ ಗೋವೆಯ ರೇವಿನ ಸುತ್ತಣ ಪ್ರದೇಶವನ್ನು ತಾನು ಪೋರ್ಚುಗೀಸರಿಗೆ ಒಪ್ಪಿಸಬೇಕು. ಗೋವೆಯ ಸುತ್ತಣ ಪ್ರದೇಶ ವಿಜಾಪುರಕ್ಕೆ ಸೇರಿದ್ದು, ಬೆಳಗಾವಿಯ ಅಧಿಪತಿಯ ಆಡಳಿತಕ್ಕೆ ಒಳಪಟ್ಟಿದು. ತಾನು ಬೆಳಗಾವಿಯನ್ನು ಆದಿಲ್‌ಷಹನಿಂದ ಕಿತ್ತುಕೊಂಡು, ಪಶ್ಚಿಮ ಕರಾವಳಿಯಲ್ಲಿ ಈ ಆಡಳಿತಕ್ಕೆ ಒಳಪಟ್ಟ ಗೋವೆಯ ಸುತ್ತಣ ಸೀಮೆಯನ್ನು ಪೋರ್ಚುಗೀಸರಿಗೆ ಪ್ರತಿಫಲಕೊಡುವುದು.

ಗೋವೆಯ ಪೋರ್ಚುಗೀಸ್ ಅಧಿಕಾರಿಗಳು ಅವಕಾಶ ದೊರೆತಾಗಲೆಲ್ಲ ವಿಜಯನಗರಕ್ಕೆ ನೆರವು ನೀಡುತ್ತ, ಪ್ರತಿಫಲವಾಗಿ ತಮ್ಮ ಸಂಪದಭಿವೃದ್ಧಿ ಪಡಿಸಿಕೊಳ್ಳುತ್ತ ಇದ್ದರು. ಈಗ ಇಂಥ ಅವಕಾಶವನ್ನು ಬಿಟ್ಟಾರೇ! ಪೋರ್ಚುಗೀಸರ ತುಪಾಕಿಸಿಪಾಯಿಗಳ, ಗೋಲಂದಾಜಪಡೆಯ ನೆರವು ಖಂಡಿತವಾದಮೇಲೆ ಹಾಹಾ ಅನ್ನುವುದರಲ್ಲಿ ವಿಜಾಪುರವನ್ನು ಆಕ್ರಮಿಸುವೆನೆಂಬುದು ರಾಯನಿಗೆ ಖಚಿತ.

ರಾಯ ಶಯ್ಯೆಯಲ್ಲಿ ಪವಡಿಸಿದ್ದನು ವ್ಯಾಧಿಗ್ರಸ್ಥನಾಗಿ. ಮೈ ಮಂಚದಲ್ಲಿ ಒರಗಿದ್ದರೂ ಮನಸ್ಸು ವಿಜಾಪುರದಲ್ಲಿ ಹಾರಾಡುತ್ತಿತ್ತು. ವ್ಯಾಧಿಯ ವಿರೋಧವೆಷ್ಟೋ ಬುದ್ಧಿಯ ಉತ್ಸಾಹವೂ ಅಷ್ಟೆ.

'ದಿಗ್ವಿಜಯ ಪ್ರಯಾಣಕ್ಕೆ ಬ್ರಹ್ಮಣ್ಯತೀರ್ಥರು ಮುಹೂರ್ತ ನಿಶ್ಚಯಮಾಡಿಕೊಟ್ಟರೆ ?'

'ಪ್ರಭು. ತಾವು ವ್ಯಾಧಿನಿರ್ಮುಕ್ತರಾಗಿ ಬಲಗೊಂಡಮೇಲೆ ವಿಜಾಪುರವೊಂದನ್ನೇಕೆ ಐದು ಸುಲ್ತಾನ್‌ಷಾಹಿಗಳನ್ನೂ ಧೂಳೀಪಟ ಮಾಡಬಲ್ಲೆವು. ಆತುರವೇನು!' ಮಂತ್ರಿ ಅಜಪರ್ಕ ತಿಮ್ಮ ರಾಯನ ವ್ಯಾಧಿಯ ದುರವಸ್ಥೆಯನ್ನು ಕಂಡು ವ್ಯಾಕುಲದಿಂದ ಉತ್ತರಿಸಿದ್ದನು.

'ಇಲ್ಲಿಲ್ಲ, ಮಂತ್ರಿವರ್ಯ. ನನಗೆ ನಾಳೆಯೇ ಆರೋಗ್ಯ. ಸಂಕಲ್ಪ ಮಾತ್ರವಿದ್ದಲ್ಲಿ ಎಂಥ ವ್ಯಾಧಿಯಾದರೂ ಕ್ಷಣಾರ್ಧದಲ್ಲಿ ಗುಣವಾಗುವುದು. ನಾಳೆಯೇ ದಿಗ್ವಿಜಯಕ್ಕೆ ಹೊರಡೋಣ. ಅಶ್ವಾರೋಹಿಯಾಗಲು ನಾ ಅಸಮರ್ಥನಾಗಿದ್ದರೆ, ಪಯಣದ ಮೊದಲ ಕೆಲವು ದಿನ ಮೇನಾದಲ್ಲಿ ಹೋದರಾಯಿತು. ನಾಳೆಯೇ ಪಯಣವೆಂದು ಸೈನ್ಯಕ್ಕೆಲ್ಲ ಆಣತಿ ಕಳುಹು'.

ಪ್ರಭುವಿನ ದೇಹಸ್ಥಿತಿಯ ಬಗೆಗೆ ರಾಜವೈದ್ಯ ಬೊಮ್ಮಪಂಡಿತನ ಅಭಿಪ್ರಾಯವನ್ನು ರಹಸ್ಯವಾಗಿ ತಿಳಿದು ಮಂತ್ರಿ ಕಳವಳಗೊಂಡಿದ್ದನು. ಅದನ್ನು



ಸೂರ್ಯಾಸ್ತ

ಪ್ರಭುವಿನ ಎದುರೇ ಆಡಿ, ಮನಸ್ಸು ಕುಗ್ಗಿಸಲು ಮಂತ್ರಿಗೆ ಇಷ್ಟವಿಲ್ಲ. ಆದರೆ ಪ್ರಭುವಿನ ಆಣತಿಯನ್ನು ನಡೆಸದಿರುವುದು ಹೇಗೆ! ಇಬ್ಬದಿಯ ಸಂಕಟದಲ್ಲಿ ಸಿಲುಕಿ, ಮೌನಮಾರ್ಗವನ್ನೆ ಅವಲಂಬಿಸಿದನು. ನಾಳೆಯೆ ದಿಗ್ವಿಜಯ ಪ್ರಯಾಣವೆಂಬ ರಾಜಾಜ್ಞೆಯನ್ನು ಪಡೆವಳರ ಸಂಕೇತಕ್ಕಾಗಿ ಬರೆದನು ; ರಾಯ ಅದಕ್ಕೆ ರಾಜಮುದ್ರೆಯನ್ನು ಒತ್ತಿದನು. ರಾಯಸವನ್ನು ಪಡೆವಳರ ಅವಗಾಹನೆಗಾಗಿ ಕಳುಹಲಾಯ್ತು.

ಮರು ಮುಂಜಾವು. ಸೂರ್ಯನ ಕೆಂಪಳಿದು ಬಿಳುಪು ಮೂಡಿತ್ತು. ನಗರದ ಹೊರವಳಯದ ವಿಶಾಲ ಕ್ಷೇತ್ರದಲ್ಲಿ ಅಗಾಧವಾದ ಕರ್ಣಾಟಕಸೈನ್ಯ ಸಜ್ಜಾಗಿ ನಿಂದಿತ್ತು. ಕಾಲ್‌ದಳ, ತುಪಾಕಿದಳ, ಅಶ್ವದಳ, ಹಸ್ತಿದಳ ಇವು ಅನುಕ್ರಮವಾಗಿ ನಿಂತಿದ್ದವು. ಸೈನ್ಯದ ಅಗ್ರಭಾಗದಲ್ಲಿ ವಿವಿಧ ರಣತೂರ್ಯಗಳು ಮೊಳಗುತ್ತಿದ್ದವು. ಆನೆಗಳು ಘೀಳಿಟ್ಟವು ; ಕುದುರೆಗಳು ಕೆನೆದವು ; ದಂಡಾಳುಗಳು ಜಯಘೋಷಮಾಡಿದರು. ಸಮಸ್ತ ಸೈನ್ಯವೂ ರಾಯನ ಆಗಮನವನ್ನು ಪ್ರತೀಕ್ಷಿಸುತ್ತಿತ್ತು.

ಕ್ಷೇತ್ರದ ಮಧ್ಯಭಾಗದಲ್ಲಿ ಎತ್ತರವಾದ ಕಟ್ಟಣೆ. ರಾಯ ಬಿಜಯಮಾಡಿದವನೆ ಕಟ್ಟಣೆಯ ಮೇಲ್‌ನಿಂತು ದಂಡಾಳುಗಳಿಗೆ ದರ್ಶನ ಕೊಡುವುದು; ಅನಂತರ ಪಡೆಯ ಮುನ್ನಡೆ. ವೇಳೆ ಕಳೆದರೂ, ಬಿಸಿಲು ತುಸು ತುಸು ಏರಿದರೂ, ಪ್ರಭುವಿನ ಆಗಮನವಾಗದಿರಲು ದಂಡಾಳುಗಳು ಚಡಪಡಿಸತೊಡಗಿದರು. ಓ, ಅಗೋ! ಏನಲ್ಲಿ ಗುಜುಗುಜು ಕಟ್ಟಣೆಯ ಬಳಿ ? ಕಟ್ಟಣೆಯ ಮೇಲೆ ? ಕಟ್ಟಣೆಯ ಮೇಲೆ ಯಾರೋ ಬಂದು ನಿಂದರಲ್ಲ; ಪ್ರಭುವೇ ಇರಬೇಕು. ಅಲ್ಲಲ್ಲ ; ಮಂತ್ರಿ. ಇದೇನು ಹೀಗೆ ? ಪ್ರಭು ಹಿಂದೆ ಬರುವನೋ ?

ಮಂತ್ರಿ ಕಟ್ಟಣೆಯ ಮೇಲೆ ನಿಂತು ನೆರೆದವರನ್ನು ಸಂಬೋಧಿಸಿದನು. ' ನೆಚ್ಚಿನ ದಳಪತಿಗಳೆ! ಕರ್ಣಾಟಕದ

ಕಟ್ಟಾಳುಗಳೆ! ಇಂದು ಜೈತ್ರಯಾತ್ರೆಯಿಲ್ಲ. ನಮ್ಮ ಪ್ರಭು ವ್ಯಾಧಿಗ್ರಸ್ಥರಾಗಿದ್ದವರು ಜೈತ್ರಯಾತ್ರೆಯ ವೇಳೆಗೆ ಗುಣ ಹೊಂದುವ ನಿರೀಕ್ಷೆಯಿತ್ತು. ಆದರೆ.... ಆದರೆ.... ಮುಂದೆ ಹೇಳಲು ಬಾಯಿ ಬಾರದು.... ಪ್ರಭು ನಮ್ಮನ್ನು ಅಗಲಿ ಹೋದರು ; ಕರ್ಣಾಟಕದ ಸೂರ್ಯಾಸ್ತವಾಯಿತು. ಇಂದು ಜೈತ್ರಯಾತ್ರೆಯಲ್ಲ; ಶ್ಮಶಾನಯಾತ್ರೆ '.

ಜೈತ್ರಯಾತ್ರೆಯ ಉತ್ಸಾಹದಲ್ಲಿದ್ದ ಯೋಧರು ಶೋಕಾಕುಲರಾಗಿ ಅವನತಮುಖಿಯಾದರು.





# ಭೂಪಾಲಂ ಸಾಹಿತ್ಯ

**ಕತೆ, ಕಾದಂಬರಿ**

ಸಿಡಿಲು
ಒಲವಿನ ಉಪವನ
ಆಹಾ ಕರ್ಣಾಟಕದೇವಿ
ಹೆಣ್ಣು

**ನಾಟಕ**

ತ್ರಿಶೂಲ
ಕುಮ್ಮಟವಲ್ಲಭ
ಕಾಲೇಜ್ ಹುಡುಗಿ

**ಜೀವನ**

ಗೊಂಚಲ್ ಮಿಂಚು
ಸ್ವಾತಂತ್ರ್ಯವೀರರು

**ಕವಿತೆ**

ಹೊಸ ಹಾಡು
ಪ್ರಳಯ ದುಂದುಭಿ
ರಂಜನ

**ಶಿಶುಗೀತೆ**

ಹೂ
ಹಪ್ಪ ಹಾ
ಗುಮ್ಮ ಬಂತು

